# ಕನಕದಾಸರ ಕೀರ್ತನೆಗಳು

(ಸ್ವರ ಸಂಯೋಜನೆಯೊಂದಿಗೆ)



ಸ್ವರ ಸಂಯೋಜನೆ

ಸಂಗೀತ ಕಲಾ ರತ್ನ ಆರ್. ಕೆ. ಶ್ರೀಕಂಠನ್



ತಾಳವಾದ್ಯ ಕಲಾಕೇಂದ್ರ

183, 8ನೇ ಅಡ್ಡರಸ್ತೆ, 2ನೇ ಬ್ಲಾಕ್, ಜಯನಗರ

ಬೆಂಗಳೂರು–560 011

# ಕನಕದಾಸರ ಕೀರ್ತನೆಗಳು

(ಸ್ವರ ಸಂಯೋಜನೆಯೊಂದಿಗೆ)



ಸ್ವರ ಸಂಯೋಜನೆ

ಸಂಗೀತ ಕಲಾ ರತ್ನ ಆರ್. ಕೆ. ಶ್ರೀಕಂಠನ್



ತಾಳವಾದ್ಯ ಕಲಾಕೇಂದ್ರ

183, 8ನೇ ಅಡ್ಡರಸ್ತೆ, 2ನೇ ಬ್ಲಾಕ್, ಜಯನಗರ

ಬೆಂಗಳೂರು–560011

Compositions of Kanaka Dasa - with notation by R.K. Srikantan.
Contents of the Study Circle organised by Percussive Arts Center — 1989.



Printed May 1990

**Price : Rs. 10-00 $ 2**

Printed at : Navaneetha Press
75, Dr. Anakru Road, Visvesvarapura,
Bangalore-560 004

Phone : 620132

ಕನಕದಾಸರ 500ನೆಯ ಜಯಂತ್ಯುತ್ಸವದ ಸಂದರ್ಭದಲ್ಲಿ ಅನೇಕ ಕಾರ್ಯಕ್ರಮಗಳು ರಾಜ್ಯದಲ್ಲೆಲ್ಲಾ ನಡೆದವಷ್ಟೆ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಕನಕದಾಸರ ಆಯ್ದ ಕೃತಿಗಳ "ಜನಪ್ರಿಯ ಕನಕಸಂಪುಟ" ವನ್ನು ಸುಲಭ ಬೆಲೆಯಲ್ಲಿ ಜನಸಾಮಾನ್ಯರಿಗೆ ಒದಗಿಸಿತು.

ಈ ಸಂದರ್ಭದ ಸವಿನೆನಪಿಗಾಗಿ ನಮ್ಮ ಕಲಾಕೇಂದ್ರ ಕನಕದಾಸರ ಆಯ್ದ ಕೃತಿಗಳನ್ನು ಸ್ವರಸಂಯೋಜನೆಯೊಂದಿಗೆ ಕೆಲವು ವಿದ್ವಾಂಸ-ವಿದುಷಿಯರಿಗೆ ಕಲಿಸುವ ಯೋಜನೆಯ ಒಂದು "ಅಧ್ಯಯನಗೋಷ್ಠಿ" ಯನ್ನೇರ್ಪಡಿಸಿತು. ನಾಡಿನ ಶ್ರೇಷ್ಠ ಜ್ಯೇಷ್ಠ ಸಂಗೀತ ವಿದ್ವಾಂಸರಾದ ಶ್ರೀ ಆರ್. ಕೆ. ಶ್ರೀಕಂಠನ್‌ರವರು ಇದರ ನೇತೃತ್ವ ವಹಿಸಿದ್ದರು.

ಹಲವಾರು ಕೃತಿಗಳನ್ನು ಆಯ್ದು ಅನೂಚಾನ ಮಟ್ಟಿನ ಪಾಠಾಂತರಗಳನ್ನು ಹೆಣೆದು ಈ ಕೃತಿಗಳ ವರ್ಣಮಟ್ಟನ್ನು ರೂಪಿಸಿ ಅಧ್ಯಯನ ಗೋಷ್ಠಿಯ ನಿರ್ದೇಶಕರಾಗಿ ನೆರವುನೀಡಿದ ಶ್ರೀ ಶ್ರೀಕಂಠನ್‌ರವರು ಈ ಕೃತಿಗಳನ್ನು ಇತರ ಅಪೇಕ್ಷೀ ವಿದ್ವಾಂಸರಿಗೂ, ವಿದ್ಯಾರ್ಥಿಗಳಿಗೂ ನಿಲುಕಿಸುವ ಸೌಕರ್ಯ ಮಾಡಿಕೊಟ್ಟಿದ್ದಾರೆ. ಈ ಕೃತಿಗಳನ್ನು ಜನಸಾಮಾನ್ಯರ ಮುಂದಿಡಲು ಸಾಧ್ಯವಾದುದಕ್ಕೆ ನಾವು ಸಂತೋಷಪಟ್ಟು ಈ ಅವಕಾಶ ದೊರಕಿಸಿದ ಈ ಶ್ರೀಕಂಠನ್‌ರವರಿಗೂ, ಇದಕ್ಕೆ ನೆರವು ನೀಡಿದ ಸಕಲರಿಗೂ ನಮ್ಮ ಕೃತಜ್ಞತೆಗಳನ್ನು ಸೂಚಿಸುತ್ತಿದ್ದೇವೆ.

ತಾಳವಾದ್ಯ ಕಲಾಕೇಂದ್ರದಪರ
**ಬೆಂಗಳೂರು ಕೆ. ವೆಂಕಟರಾಂ**
ನಿರ್ವಾಹಕ ನಿರ್ದೇಶಕ

# ಪರವಿಡಿ


| | | |
|---|---|---|
| | ಕನಕದಾಸರು | 1 |
| | ಶ್ರೀ ಕನಕ ಸಂಪುಟ | 6 |
| 1. | ದೇವತಾ ಪ್ರಾರ್ಥನೆ | 9 |
| 2. | ಶಿವ ಶಿವ ಶಿವ ಎನ್ನಿರೋ | 11 |
| 3. | ಭಕ್ತಿ ಸಾಧನೆ | 13 |
| 4. | ಶೇಷಶಯನ ನಿನ್ನ | 15 |
| 5. | ಎಳ್ಳು ಕಾಳಿನಷ್ಟು ಭಕ್ತಿ | 17 |
| 6. | ಹೇಗೆ ನೀ ದಾಸನಾದೆ | 20 |
| 7. | ಹರಿ ಕೀರ್ತನೆಯ ಮಾಡಿ | 22 |
| 8. | ನಾರಾಯಣ ನಮೋ ನಾರಾಯಣ | 23 |


---

# ಕನಕದಾಸರು

ಕನಕದಾಸರು ಜನ್ಮತಾಳಿ ಐನೂರು ವರ್ಷಗಳು ಕಳೆದಿವೆ. ಅವರ ಪಂಚಮ ಶತಮಾನೋತ್ಸವವನ್ನು ಕರ್ನಾಟಕ ರಾಜ್ಯದಾದ್ಯಂತ ವಿಜೃಂಭಣೆಯಿಂದ ಆಚರಿಸಲಾಗುತ್ತಿದೆ. ಕರ್ನಾಟಕ ಸರ್ಕಾರವೂ, ಖಾಸಗಿ ಸಂಸ್ಥೆಗಳೂ ಅತ್ಯಂತ ಉತ್ಸಾಹದಿಂದಲೂ. ಶ್ರದ್ಧಾಭಕ್ತಿಗಳಿಂದಲೂ ಈ ಉತ್ಸವವನ್ನು ಆಚರಿಸುತ್ತಿವೆ. ಅವರ ಇಷ್ಟದೇವತಾ ಕ್ಷೇತ್ರವಾದ ಕಾಗಿನೆಲೆಯು ಒಂದು ಯಾತ್ರಾಸ್ಥಳವಾಗಿದೆ. ಸಾಹಿತ್ಯ ಹಾಗೂ ಸಂಗೀತ ವಿದ್ವಾಂಸ–ವಿದುಷಿಯರು ಅಧಿಕ ಸಂಖ್ಯೆಯಲ್ಲಿ ಈ ಪವಿತ್ರ ಸ್ಥಳಕ್ಕೆ ಹೋಗಿ ಯಥಾಶಕ್ತಿ ತಮ್ಮ ಸೇವೆ ಸಲ್ಲಿಸಿ, ತಮ್ಮ ಭಕ್ತಿಕಾಣಿಕೆಯನ್ನು ಸಮರ್ಪಿಸಿದರು. ಕರ್ನಾಟಕದ ನಾನಾ ಕಡೆಗಳಲ್ಲಿ ಕನಕದಾಸರನ್ನು ಕುರಿತ ಉಪನ್ಯಾಸಗಳೂ, ವಿಚಾರಗೋಷ್ಠಿಗಳೂ, ಚರ್ಚಾಕೂಟಗಳೂ ನಡೆದಿವೆ. ಈ ಸಂದರ್ಭದಲ್ಲಿ ಕನಕದಾಸರನ್ನು ಕುರಿತ ಒಂದು ವಿಶೇಷ ಸಂಪುಟವನ್ನು ಕನ್ನಡ-ಸಂಸ್ಕೃತಿ ನಿರ್ದೇಶನಾಲಯವು ಹೊರತಂದಿದೆ. ಹೀಗೆ ಕನ್ನಡ ಜನತೆಯ ಗೌರವಾದರಗಳಿಗೆ ಪಾತ್ರರಾಗಿ ನಿತ್ಯಸ್ಮರಣೀಯರಾಗಿ ಬೆಳಗುತ್ತಿರುವುದು ಕನಕದಾಸರ ಹೆಗ್ಗಳಿಕೆ. ಇಂಥಾ ಮಹಾಪುರುಷರು ಕರ್ನಾಟಕದಲ್ಲಿ ಜನ್ಮತಾಳಿ ಸಾರವಂತವಾದ ಬದುಕಿನಿಂದಲೂ ಕೃತಿಗಳಿಂದಲೂ ಈ ಸಮಾಜದ ಉನ್ನತಿಗಾಗಿ ಶ್ರಮಿಸಿ, ಭಕ್ತಿ ಜ್ಞಾನ ವೈರಾಗ್ಯಗಳನ್ನು ಪೋಷಿಸಿದ್ದು ಮಹಾ ಸೌಭಾಗ್ಯ.

ಕನಕದಾಸರ ಲೋಕಸೇವಾಕಾರ್ಯವು ಮೂರು ಮುಖಗಳ ಮಂದಾಕಿನೀ ಪ್ರವಾಹ. ಅವುಗಳಲ್ಲಿ ಮೊದಲನೆಯದು ಸಾಹಿತ್ಯ; ಎರಡನೆಯದು ಸಮಾಜಸೇವೆ ಮೂರನೆಯದು ಸಂಗೀತ. ಈ ಮೂರು ಕ್ಷೇತ್ರಗಳಲ್ಲೂ ಅವರು ಮಾಡಿರುವ ಸಾಧನೆ ಸಾರ್ವಕಾಲಿಕವಾಗಿ ಉಳಿಯಬಲ್ಲದ್ದು. ಈ ಸಾಧನೆಯ ಹಿನ್ನೆಲೆಯಲ್ಲಿ ನಾವು ಕಾಣುವುದು ಒಬ್ಬ ಹರಿದಾಸ ಶ್ರೇಷ್ಠರನ್ನು ಮತ್ತು ಒಬ್ಬ ಮಹಾದಾರ್ಶನಿಕರನ್ನು.

## 1. ಕನಕದಾಸರ ಕಾವ್ಯಸೃಷ್ಟಿ

ಕನಕದಾಸರ ಕಾವ್ಯಸೃಷ್ಟಿ ಗಾತ್ರದಲ್ಲಿ ಗಣನೀಯವಲ್ಲದಿದ್ದರೂ ಗುಣದಲ್ಲಿ ತುಂಬಾ ಉತ್ಕೃಷ್ಟವಾದದ್ದು. ಅವರ ಕಾವ್ಯಕೃತಿಗಳಲ್ಲಿ ಮೊದಲನೆಯದು ಮೋಹನತರಂಗಿಣಿ. ಇದೊಂದು ಭಕ್ತಿಪ್ರಧಾನವಾದ ಶೃಂಗಾರಕಾವ್ಯ. ಇದರಲ್ಲಿ ಮಹಾಕಾವ್ಯದ ಲಕ್ಷಣಗಳೆಲ್ಲವೂ ಕಂಡುಬರುತ್ತವೆ. ಇದರ ಛಂದಸ್ಸು ಸಾಂಗತ್ಯ. ಈ ಛಂದಸ್ಸಿನಲ್ಲಿರುವ ಅವರ ಮತ್ತೊಂದು ಕೃತಿ ನಾರಸಿಂಹ ಸ್ತೋತ್ರ.

ಕನಕದಾಸರು ಬರೆದಿರುವ ಕಾವ್ಯಗಳು ಐದು, ಎರಡು ಸಾಂಗತ್ಯಗಳು ಮತ್ತು ಮೂರು ಲಲಿತ ಮನೋಹರವಾದ ಷಟ್ಪದಿ ಕಾವ್ಯಗಳು:. ನಳಚರಿತ್ರೆ, ಹರಿಭಕ್ತಿಸಾರ ಮತ್ತು ರಾಮಧಾನ್ಯ ಚರಿತ್ರೆ. ನಳಚರಿತ್ರೆ ಮತ್ತು ಹರಿಭಕ್ತಿಸಾರ ಅತ್ಯಂತ

ಅಮೂಲ್ಯವೂ. ಜನಪ್ರಿಯವೂ ಆಗಿ ಶೋಭಿಸುತ್ತಿರುವ ಕಾವ್ಯಗಳು. ಇಲ್ಲಿಯ ಸರಸ ಪದವಿನ್ಯಾಸ, ನಿರೂಪಣಾ ಕೌಶಲ, ಪ್ರಾಸಾನುಪ್ರಾಸಾದಿಗಳ ಅಲಂಕಾರ ಸೌಭಾಗ್ಯ- ಇವೆಲ್ಲವೂ ಕಮನೀಯ, ಎಲ್ಲವೂ ಹೃದ್ಯ, ಎಲ್ಲವೂ ಚೋದ್ಯ. ಹರಿಭಕ್ತಿ ಸಾರವಾದರೋ ಹಿಂದೂದರ್ಶನದ ಸಾರವಂತವಾದ ವಾಣಿಯಾಗಿ ನಿತ್ಯಾನುಷ್ಠಾನಕ್ಕೆ ಮತ್ತು ಜೀವೋನ್ನತಿ ಸಾಧನೆಗೆ ನೆರವಾಗುವ ಕಾವ್ಯರತ್ನ. ನಳಚರಿತ್ರೆಯ ಕಾವ್ಯ ಗುಣಗಳನ್ನು ಎಷ್ಟು ಕೊಂಡಾಡಿದರೂ ಅಲ್ಪವೇ. ಕನಕದಾಸರ ಷಟ್ಪದೀ ನಿರ್ವಹಣೆ ಕುಮಾರವ್ಯಾಸನ ಚಾತುರ್ಯಕ್ಕೆ ಸರಿಸಮಾನವಾಗಿ ನಿಲ್ಲಬಲ್ಲದ್ದು.

ದೀನ ನಾನು ಸಮಸ್ತ ಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು.
ಏನ ಬಲ್ಲೆನು ನಾನು ನೆರೆ ಸು
ಜ್ಞಾನ ಮೂರುತಿ ನೀನು ನಿನ್ನ ಸ
ಮಾನರುಂಟೇ ದೇವ ರಕ್ಷಿಸು ನಮ್ಮನವರತ

ಎಂಬ ಸಾಲುಗಳು ಕನಕದಾಸರ ಸ್ವೈಜವಾದ ಭಕ್ತಿ ನಿರೂಪಣೆಗೆ ನಿದರ್ಶನ. ಅದರಂತೆಯೇ,

ಬೀಜ ವೃಕ್ಷದೊಳಾಯ್ತು ವೃಕ್ಷಕೆ
ಬೀಜ ವಾರಿಂದಾಯ್ತು ಲೋಕದಿ
ಬೀಜ ವೃಕ್ಷ ನ್ಯಾಯ ವಿದ ಭೇದಿಸುವರಾರಿನ್ನು
ಸೋಜಿಗವ ನೀ ಬಲ್ಲೆ ನಿನ್ನೊಳು
ರಾಜಿಸುತ ಮೊಳೆದೋರುವುದು ಸುರ
ರಾಜನಂದನನಮಿತ ರಕ್ಷಿಸು ನಮ್ಮನನವರತ

ಎಂಬ ಸಾಲುಗಳು ಸದಾ ಪ್ರಜ್ವಲಿಸುವ ಆಧ್ಯಾತ್ಮಿಕ ದಾರಿದೀಪಗಳು.

**2. ಸಮಾಜ ಸುಧಾರಣೆ**

ಈ ಲೋಕ ಈಶಕೃತ ಮತ್ತು ಈಶಾವಾಸ್ಯ. ಆದುದರಿಂದ ಈ ಜಗತ್ತಿನ ಸುಸ್ಥಿತಿ ಪ್ರತಿಯೊಬ್ಬ ಮಾನವನ ಹೊಣೆ. ಸಮಾಜ ಸೇವೆ ನಾವು ತೀರಿಸಲೇಬೇಕಾದ ಗುಣಗಳಲ್ಲೊಂದು ಅದೇ ದೇವತಾರಾಧನೆ. ಕನಕದಾಸರ ಸಮಾಜಸೇವಾರೂಪವಾದ ದೇವತಾರಾಧನೆ ಅಸದೃಶವಾದುದು. ಸಮಾಜದ ಬೇನೆಗಳು ಹಲವಾರು, ವಕ್ರತೆಗಳು ಅನಂತವಾದವು. ಸ್ವಾರ್ಥಪರತೆ, ಮೇಲು ಕೀಳುಗಳ ವಿಕಟವರ್ತನೆ, ದುಷ್ಟವರ್ತನೆ, ದುರ್ಬಲ ಶೋಷಣೆ ಇತ್ಯಾದಿಗಳು ಸಮಾಜದ ವ್ಯಾಧಿಗಳು. ಈ ವ್ಯಾಧಿಗಳ ಚಿಕಿತ್ಸೆಗೆ ಬಹುವಾಗಿ ಶ್ರಮಿಸಿದವರು ಕನಕದಾಸರು. ಈ ಕಾರ್ಯಸಾಧನೆಗಾಗಿ ಸಂಗೀತ ಸಾಹಿತ್ಯಗಳ ಮಾಧ್ಯಮವನ್ನು ಅವಲಂಭಿಸಿದರು. ಜನತೆಯ ಮನಸ್ಸಿನ ಓರೆಕೋರೆಗಳನ್ನು ಕಟುವಾಗಿ ಟೀಕಿಸಿದರು- ಹಾಸ್ಯ ಮಾಡಿದರು. ಹಿತನುಡಿಗಳನ್ನು ನುಡಿದರು,

ನೀತಿಯನ್ನು ಬೋಧಿಸಿದರು, ಭೋಗ ಜೀವನವನ್ನು ತೆಗಳಿದರು, ಭಕ್ತಿಯನ್ನು ಬೆಳೆಸಿದರು. ಆಧ್ಯಾತ್ಮಪ್ರಭೆಯನ್ನು ಬೆಳೆಸಿದರು. ''ನಾನು ನೀನು ಎನ್ನದಿರೊ ಹೀನ ಮಾನವ'' ಎಂದರು. ''ಸಾಕು ಸಾಕು ಮನುಜ ಸೇವೆ'' ಎಂದು ಹೇಳಿ ಭಗವಂತನಲ್ಲಿ ಮನಸ್ಸನ್ನು ನಿಲ್ಲಿಸಿದರು. ''ಡೊಂಕು ಬಾಲದ ನಾಯಕರೇ'' ಎಂದು ಸಮಾಜದ್ರೋಹಿ ಗಳನ್ನು ಹೀಯಾಳಿಸಿದರು. ''ಕುಲಕುಲವೆಂದು ಹೊಡೆದಾಡದಿರಿ'' ಎಂದು ಡಂಗುರ ಸಾರಿದರು. ''ಕೇಶವನೊಲುಮೆಯು ಆಗುವ ತನಕ ಹರಿದಾಸರೊಳಿರುತಿರು'' ಎಂಬ ಶಾಂತಿಮಂತ್ರವನ್ನುಪದೇಶಿಸಿದರು. ''ನೀ ಮಾಯೆಯೊಳಗೋ, ನಿನ್ನೊಳು ಮಾಯೆಯೋ'' ಎಂದು ತತ್ತ್ವ ಚಿಂತನೆಯೆಡೆಗೆ ಮನವನ್ನು ತಿರುಗಿಸಿದರು. ''ತನು ನಿನ್ನದು ಜೀವನ ನಿನ್ನದು'' ಎಂದು ಹೇಳಿ ಅದ್ವೈತ ದರ್ಶನದ ನವನೀತ ಭಾಗವನ್ನು ನಮ್ಮ ಮುಂದಿಟ್ಟರು. ಹೀಗೆ ಕನಕದಾಸರು ಮಾಡಿರುವ ಜನತಾ ಜನಾರ್ದನ ಸೇವೆ ಮಹೋನ್ನತವೂ, ಸಾರ್ವಕಾಲಿಕವೂ ಆದದ್ದು. ಕವಿಯೂ, ವಾಗ್ಗೇಯಕಾರರೂ ಮತ್ತು ದಾರ್ಶನಿಕರೂ ಆಗಿ ಯಶಃಕಾಯರಾಗಿರುವ ಉತ್ಕರ್ಷತೆ ಕನಕದಾಸರಿಗೆ ಸಲ್ಲುತ್ತದೆ.

## 3. ಕನಕದಾಸರು ಮತ್ತು ಸಂಗೀತ

ಕನಕದಾಸರು ಸಂಗೀತ ಕ್ಷೇತ್ರಕ್ಕೆ ನೀಡಿರುವ ಕೊಡುಗೆಯನ್ನು ವಿಶೇಷವಾಗಿ ಪ್ರಸ್ತಾಪಿಸುವುದು ಅತ್ಯಂತ ಸಂಗತವೂ, ಔಚಿತ್ಯಪೂರ್ಣವೂ ಆಗಿದೆ. ಹರಿದಾಸ ಪುಂಗವರಲ್ಲಿ ಕನಕದಾಸರು ನಿತ್ಯಸ್ಮರಣೀಯರು. ಅವರ ಸಂಗೀತ ಕೃತಿಗಳ ವೈಶಿಷ್ಟ್ಯ ವೆಂದರೆ ಸರಳತೆ, ಸುಭಗತೆ, ಭಕ್ತಿಪ್ರಕಾಶ. ಅವು ಅಂತಃಸೌಂದರ್ಯದಿಂದ ಪ್ರಜ್ವಲಿ ಸುವ ಜ್ಞಾನ ದೀಪಗಳು. ದೇವತಾರಾಧನೆಯ ಸಮಯದಲ್ಲಿಯೂ, ಭಜನೆ, ಗೋಷ್ಠಿ ಗಾನಗಳಲ್ಲಿಯೂ, ಸಂಗೀತ ಸಭೆಗಳಲ್ಲಿಯೂ ಪರಿಣಾಮಕಾರಿಯಾಗಿ ನಿರೂಪಿಸಲು ಯೋಗ್ಯವಾದವುಗಳು. ಭಕ್ತಿ ಮತ್ತು ರಕ್ತಿ ಈ ರಚನೆಗಳ ಪ್ರಧಾನ ಗುಣ ವಿಶೇಷ.

ಕನಕದಾಸರ ಐನೂರನೆಯ ಜನ್ಮ ಶತಮಾನೋತ್ಸವದ ಈ ಸಂದರ್ಭದಲ್ಲಿ ದೇಶದಾದ್ಯಂತ ಈ ದಾಸವರೇಣ್ಯರನ್ನು ಕುರಿತು ವರ್ಣರಂಜಿತವಾದ ಕಾರ್ಯಕ್ರಮ ಗಳನ್ನು ನಡೆಸಿದ್ದನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ. ಅವುಗಳಲ್ಲಿ ಕರ್ನಾಟಕ ತಾಳವಾದ್ಯ ಕೇಂದ್ರದ ಮುಖ್ಯಸ್ಥರಾದ ವಿದ್ವಾನ್ ಬೆಂಗಳೂರು ವೆಂಕಟರಾಂರವರು ವ್ಯವಸ್ಥೆ ಮಾಡಿ ನಡೆಸಿದ ಕನಕದಾಸರ ಕೃತಿಗಳ ವ್ಯಾಸಂಗ ಗೋಷ್ಠಿಯು ಉಲ್ಲೇಖಾರ್ಹ ವಾದದ್ದು. ಸುಮಾರು ಹತ್ತು ಮಂದಿ ವಿದುಷಿಯರು ಈ ಗೋಷ್ಠಿಯಲ್ಲಿ ಪಾಲ್ಗೊಂಡು ಪ್ರಾತಿನಿಧಿಕವಾದ ಎಂಟು ಕೃತಿಗಳನ್ನು ಸಂಗೀತ ಕಲಾರತ್ನ ವಿದ್ವಾನ್ ಆರ್. ಕೆ. ಶ್ರೀಕಂಠನ್‌ರವರ ನೇತೃತ್ವದಲ್ಲಿ ಅಭ್ಯಾಸಮಾಡಿ 5-4-1989ರಂದು ನಡೆದ ಸಮಾ ರೋಹ ಸಂದರ್ಭದಲ್ಲಿ ಹಾಡಿ ಕನಕದಾಸರಿಗೆ ಭಕ್ತಿಗೌರವಗಳನ್ನು ವ್ಯಕ್ತಪಡಿಸಿದರು. ಈ ಅಧ್ಯಯನ ಗೋಷ್ಠಿಗಾಗಿ ಆರಿಸಲಾಗಿದ್ದ ರಚನೆಗಳನ್ನೂ ಮತ್ತು ಅವುಗಳ ಹಿರಿಮೆಯನ್ನೂ ಮನಸ್ಸಿಗೆ ತಂದು ಕೊಳ್ಳುವುದು ಔಚಿತ್ಯ ಪೂರ್ಣವಾಗಿದೆ.

## 1. ನಮ್ಮಮ್ಮ ಶಾರದೆ

ಇದು ದೇವತಾಪ್ರಾರ್ಥನಾರೂಪವಾದದ್ದು. ಸಂಪ್ರದಾಯದಂತೆ ವಿಘ್ನನಿವಾರಕನಾದ ಗಣನಾಯಕನನ್ನು ವಂದಿಸುವುದು ಕೀರ್ತನೆಯ ವಸ್ತು. ಅಚ್ಚಕನ್ನಡನುಡಿ ಇಲ್ಲಿ ಅತ್ಯಂತ ಮೋಹಕವಾಗಿ ಮೂಡಿ ಬಂದಿದೆ. ''ಕಮ್ಮಗೋಲನ ವೈರಿಸುತ'' (ಮನ್ಮಥನ ವೈರಿ ಶಿವನ ಮಗ)- ಈ ಶಬ್ದವು ಕನಕದಾಸರು ಮಾಡಿರುವ ಅಪರೂಪ ಪ್ರಯೋಗಗಳಲ್ಲೊಂದು. ಮೋಹನರಾಗದ ಈ ಕೃತಿ ಮನಮೋಹಕವಾದದ್ದು.

## 2. ಶಿವ ಶಿವ ಶಿವ ಎನ್ನಿರೋ

ಈ ಕೀರ್ತನೆಯಲ್ಲಿ ಕನಕದಾಸರು ಶಿವಭಕ್ತಿಯ ಹಿರಿಮೆಯನ್ನು ಚೇತೋಹಾರಿಯಾಗಿ ಚಿತ್ರಿಸಿದ್ದಾರೆ. ಪರಶಿವನು ಭವರೋಗವೈದ್ಯ. ರೋಗದ ಮೂಲವನ್ನು ಹುಡುಕಿ ಅದನ್ನು ನಿವಾರಿಸಬಲ್ಲ ದಕ್ಷನಾದ ವೈದ್ಯ. ಶಿವಾರಾಧನೆ ಇಹಪರಗಳೆರಡಕ್ಕೂ ಸಾಧನರೂಪವಾದದ್ದು. ಅದರಿಂದಲೇ ಮಾನವನಿಗೆ ಅಕ್ಷಯ ಸುಖಪ್ರಾಪ್ತಿ. ಆದುದರಿಂದ ಮನುಷ್ಯನಾಗಿ ಜನಿಸಿದವನು ಕಾಲಹರಣ ಮಾಡದೆ ಶಿವಾರಾಧನೆಯನ್ನು ಮಾಡಿ ಬದುಕನ್ನು ಸಾರ್ಥಕಪಡಿಸಿಕೊಳ್ಳಬೇಕು ಎಂದು ಎಚ್ಚರಿಸುತ್ತಾರೆ. ಈ ಕೀರ್ತನೆ ಆರಭಿರಾಗ ಮತ್ತು ಆದಿತಾಳದಲ್ಲಿದೆ.

## 3. ಸಾಕು ಸಾಕು ಮನುಜ ಸೇವೆಯು

''ಕಾಯಲಾರೆನು ಕೃಷ್ಣ ಕಂಡವರ ಬಾಗಿಲೊಳು ನಾಯಿ ಕುನ್ನಿಗಳಂತೆ'' ಎಂದರು ಪುರಂದರದಾಸರು. ''ಮಮತ ಬಂಧನಯುತ ನರಸ್ತುತಿ ಸುಖಮಾ'' ಎಂದರು ತ್ಯಾಗರಾಜರು. ಅದರಂತೆಯೇ ವರಾಳಿ ರಾಗದ ಈ ಸುಂದರವಾದ ಕೃತಿಯಲ್ಲಿ ನರಸೇವೆಯ ಕಷ್ಟಕಾರ್ಪಣ್ಯಗಳನ್ನು ತಲಸ್ಪರ್ಶಿಯಾಗಿ ಎತ್ತಿತೋರಿಸಿದ್ದಾರೆ. 'ಹೀನ ಮಾನವನ ಸೇವೆಗಾಗಿ ಗೊತ್ತುಗುರಿಯಿಲ್ಲದೆ ಅಲೆದಾಡುವ ನಮ್ಮ ಪಾಡು ನಾಯಿಯ ಅಲೆದಾಟಕ್ಕೆ ಸಮಾನವಾದದು" ಎನ್ನುವ ಕನಕವಾಣಿಯು ಮರ್ಮಭೇದಕವಾದದ್ದು.

## 4. ಶೇಷಶಯನ ನಿನ್ನ

ನಮ್ಮ ತತ್ತ್ವಶಾಸ್ತ್ರದಲ್ಲಿ ಭಕ್ತಿಗೆ ಅತ್ಯಂತ ಪ್ರಮುಖ ಸ್ಥಾನವುಂಟು. ಭಗವಂತನ ಪಾದಾರವಿಂದಗಳಲ್ಲಿ ನಿಶ್ಚಲವಾಗಿ ಮನಸ್ಸನ್ನು ನಿಲ್ಲಿಸುವುದೇ ಭಕ್ತಿ. ಅಂತಹ ಭಕ್ತರು ಪರಮಾತ್ಮನಿಗೆ ಬಹು ಪ್ರಿಯರು. ಪ್ರಹ್ಲಾದ ನಾರದಾದಿಗಳು ಆ ಬಗೆಯಾದ ಭಕ್ತರ ಶ್ರೇಣಿಗೆ ಸೇರಿದವರು. ಅಂಥಾ ಮಹಾನುಭಾವರ ಸಾನ್ನಿಧ್ಯವೇ ಜೀವಕ್ಕೆ ದೊಡ್ಡ ಸಂಸ್ಕಾರ. ಆ ಸಾನ್ನಿಧ್ಯದ ಸೌಭಾಗ್ಯವನ್ನು ಕರುಣಿಸು ಎಂದು ಶೇಷಶಯನನಾದ ಆದಿಕೇಶವನನ್ನು ಪ್ರಾರ್ಥಿಸುವ ಈ ದಾಸಸಾಹಿತ್ಯ ಸಾವೇರಿರಾಗ ಮತ್ತು ಮಿಶ್ರ ಛಾಪುತಾಳದಲ್ಲಿ ರಚಿತವಾಗಿದೆ.

## 5. ಎಳ್ಳುಕಾಳಿನಷ್ಟು ಭಕ್ತಿ

ತೋಡಿರಾಗದ ಈ ದೇವರನಾಮದಲ್ಲಿ ಭಕ್ತನ ಪರಿತಾಪ ನಿರ್ವೇದಗಳು ಎದ್ದು ಕಾಣುವ ಅಂಶಗಳು, ಭಕ್ತಿಯಿಲ್ಲದ ಆಚಾರಗಳು ಕೇವಲ ಆಯಾಸಕರ. ತೋರಿಕೆಯ ಭಕ್ತಿ ನಿರರ್ಥಕ. ಮಂಡೂಕ ಸ್ನಾನ ಚಿತ್ತ ನೈರ್ಮಲ್ಯಕ್ಕೆ ಸಾಧಕವಾಗುವುದೇ ? ಗಾಣದೆತ್ತಿನ ಪ್ರದಕ್ಷಿಣೆ ಪರಮಾತ್ಮನ ಅನುಗ್ರಹವನ್ನು ಸಂಪಾದಿಸಿಕೊಡುವುದೇ ? ಕೇವಲ ಯಾಂತ್ರಿಕವಾದ ಸ್ನಾನ ಜಪತಪಾದಿಗಳು ಗುರಿಯನ್ನು ಮುಟ್ಟಿಸಲಾರವು. ಇಂಥಾ ಯಾಂತ್ರಿಕ ಸಾಧನೆಗಳಲ್ಲಿ ಕಾಲಹರಣ ಮಾಡುವವರನ್ನು ತಮ್ಮಲ್ಲಿಯೇ ಆರೋಪಿಸಿಕೊಂಡು ಆದಿಕೇಶವನಲ್ಲಿ ಸದ್ಗತಿಗಾಗಿ ಮೊರೆಯಿಡುತ್ತಾರೆ.

## 6. ಹೇಗೆ ನೀ ದಾಸನಾದೆ

ಶಂಕರಾಭರಣ ರಾಗದ ಈ ರಚನೆಯಲ್ಲಿ ದಾಸನಿಗೆ ಬೇಕಾದ ಪೂರ್ವಸಿದ್ಧತೆಗಳನ್ನು ಪಟ್ಟಿಮಾಡಿಕೊಡುತ್ತಾರೆ. ಇದನ್ನು ವೇದಾಂತ ಪರಿಭಾಷೆಯಲ್ಲಿ ಸಾಧನ ಚತುಷ್ಟಯವೆನ್ನುತ್ತಾರೆ. ನಿತ್ಯಾನಿತ್ಯ ವಿವೇಕ, ಭೋಗವಿರಾಗ, ಶಮದಮಾದಿಗಳ ಅಭ್ಯಾಸ ಮತ್ತು ಶ್ರದ್ಧೆ–ಇವೇ ಸಾಧನ ಚತುಷ್ಟಯ. ಇದರ ತಿಳಿಗನ್ನಡದ ವಿವರಣೆಯೇ ಈ ರಚನೆ. ಇಲ್ಲಿಯ ಉಪದೇಶ ಅನುದಿನದ ಚಿಂತನೆಗೆ ವಿಷಯ.

## 7. ಕೀರ್ತನೆಯ ಮಾಡಿ ಕೈವಲ್ಯ ಪಡೆವರು ಜನರು

ನಾಮ ಕೀರ್ತನೆಯ ಮಹಿಮೆ ಈ ದೇವರನಾಮ ಸಾರಿ ಹೇಳುವ ವಿಷಯ. ಹಲವು ನಾಮಗಳನ್ನು ಕುರಿತು ಹಂಬಲಿಸುವುದರಿಂದ ಇಷ್ಟಸಿದ್ಧಿ ಕೈಗೂಡುವುದಿಲ್ಲ. ತೀರ್ಥಯಾತ್ರೆ ನಾಮಕೀರ್ತನೆಗೆ ಸಾಟಿಯಾಗುವುದಿಲ್ಲ. 'ಆದಿಕೇಶವನನ್ನು ದೃಢವಾಗಿ ನಂಬಿ ಭಜಿಸು; ಅದೇ ಕೈವಲ್ಯ ಪ್ರಾಪ್ತಿಗೆ ಸುಲಭೋಪಾಯ'– ಇದು ಅಪರಂಜಿಯಲ್ಲಿ ತೂಗಬೇಕಾದ ಕನಕದಾಸರ ವಚನವೇದ.

## 8. ನಾರಾಯಣ ನಮೋ

ಮಧ್ಯಮಾವತಿಯಲ್ಲಿರುವ ಈ ಕೃತಿ ಪರಮಾತ್ಮನ ಅಪರಿಮಿತವಾದ ಮಹಿಮಾತಿಶಯಗಳನ್ನು ಕೊಂಡಾಡುತ್ತದೆ. ಕೊನೆಯ ಎರಡು ಚರಣಗಳಲ್ಲಿ ಮಾಲೆ ಮಾಲೆಯಾಗಿ ಬರುವ ರೂಪಕಾಲಂಕಾರಗಳ ಪಂಕ್ತಿ ಕಿವಿಗೆ ಅಮೃತಪ್ರಾಯವಾಗಿರುವುದು ಮಾತ್ರವಲ್ಲ ಸುಂದರ ಸಾಹಿತ್ಯ ಸಮಾರಾಧನೆಯಾಗಿ ರಸಿಕಜನ ಹೃದ್ರಂಜಕವಾಗಿದೆ.

ವ್ಯಾಸಂಗಗೋಷ್ಠಿಯಲ್ಲಿ ಅಭ್ಯಾಸಮಾಡಲಾದ ಮೇಲಿನ ಎಂಟು ಕೃತಿಗಳು ಕನಕದಾಸರ ಭಕ್ತಿಜ್ಞಾನ ವೈರಾಗ್ಯಭರಿತವಾದ ಸಾಹಿತ್ಯರಾಶಿಗೆ ದಿಗ್ದರ್ಶನ ಮಾತ್ರ. ಅಮೂಲ್ಯವಾದ ಇಂತಹ ಕೃತಿಗಳನ್ನು ಕನಕದಾಸರ ಕೃತಿಭಂಡಾರದಲ್ಲಿ ಬಹುಸಂಖ್ಯೆಯಲ್ಲಿ ಕಾಣಬಹುದು. ಅವುಗಳನ್ನು ಹೆಚ್ಚು ಹೆಚ್ಚಾಗಿ ಬಳಕೆಗೆ ತರುವುದು ನಮ್ಮ ಸಂಗೀತ ವಿದ್ವಾಂಸರೂ ಮತ್ತು ವಿದುಷಿಯರಿಂದ ಅಗತ್ಯವಾಗಿ ಆಗಬೇಕಾದ ಕೆಲಸ. ಕನಕದಾಸರ ಕೃತಿ ವಾಙ್ಮಯವು ಸುಖಶಾಂತಿಗಳ ಮೂಲಧನ.

**ಟಿ. ಎನ್. ಪದ್ಮನಾಭನ್**

## ಮುನ್ನುಡಿ

ಮಹಾತ್ಮರ ಮನಸ್ಸು, ಮಾತು, ಮಾರ್ಗ ಮತ್ತು ಕಲ್ಪನೆ ಎಲ್ಲವೂ ಮಹತ್ವದ್ದೆ. ಇಂಥವರು ಪರಮಾತ್ಮನ ವಿಶೇಷಾನುಗ್ರಹಕ್ಕೆ ಪಾತ್ರರಾದವರೆಂಬುದರಲ್ಲಿ ಸಂದೇಹವೇ ಇಲ್ಲ. ಹೃದಯಕ್ಕೆ ಹಿತವಾದ ಭಾವನೆ, ಮನಸ್ಸಿಗೆ ಶುಚಿಯಾದ ಯೋಜನೆ, ಬುದ್ಧಿಗೆ ಬಲವಾದ ಅವಲಂಬನ, ಬಾಯಿಗೆ ರುಚಿಯಾದ ಪದಪಂಕ್ತಿ, ಸ್ಮರಣೆಗೆ ಯೋಗ್ಯವಾದ ಸದರ್ಥ ಸಮುದಾಯ – ಇವೇ ಇಂತಹ ಪುಣ್ಯಪುರುಷರ ಕೊಡುಗೆ— ಸಮಾಜಕ್ಕೆ. ಶ್ರೀ ಕನಕದಾಸರು ತತ್ವವೇತ್ತರೂ, ಭಕ್ತಶ್ರೇಷ್ಠರೂ, ನಾಡನುಡಿಯಲ್ಲಿ ಭಗವಂತನನ್ನು ಕೊಂಡಾಡುತ್ತಾ, ನೀತಿನಿಯಮಗಳನ್ನು ತಾವು ಆಚರಿಸುತ್ತಾ ಅವುಗಳನ್ನು ಜನಸಾಮಾನ್ಯಕ್ಕೆ ಸಾರಿರುವ ಮಹಾಕವಿಗಳು ಮತ್ತು ಸಂತಶ್ರೇಷ್ಠರು.

ಶ್ರೀ ಕನಕದಾಸರ ಕೀರ್ತನೆಗಳ ಪೈಕಿ ಎಂಟು ಕೀರ್ತನೆಗಳನ್ನು ದಾಸಸಾಹಿತ್ಯದಲ್ಲಿ ಪಳಗಿದವರಾದ ಶ್ರೀ ಬೆಟಗೇರಿ ಕೃಷ್ಣಶರ್ಮ ಹಾಗು ಹುಚ್ಚುರಾವ್ ಬೆಂಗೇರಿ ಇವರಿಂದ ಸಂಪಾದಿತವಾದ "ಶ್ರೀ ಕನಕದಾಸರ ಭಕ್ತಿಗೀತೆಗಳು" ಎಂಬ ಗ್ರಂಥದಿಂದ ಆರಿಸಿ ಕೊಂಡು, ಅವುಗಳಿಗೆ ಗ್ರಂಥದಲ್ಲೇ ಸೂಚಿಸಲ್ಪಟ್ಟಿರುವ ರಾಗ–ತಾಳಗಳಲ್ಲಿ ಶಾಸ್ತ್ರೀಯ ಸಂಗೀತದ ಕವಚವನ್ನು ತೊಡಿಸಲಾಗಿದೆ.

### ದೇವರ ನಾಮಗಳನ್ನು ಹಾಡುವ ಬಗೆ ಹೇಗೆ ?

ದೇವರ ನಾಮಗಳ ವೈಶಿಷ್ಟ್ಯ ಅವಕ್ಕೇ ಮೀಸಲು. ಕೀರ್ತನವೆಂದರೆ ಭಗವಂತನ ಉಜ್ವಲ ಮಹಿಮೆಗಳನ್ನು, ಗುಣಶೀಲಗಳನ್ನೂ ಭಕ್ತಿ ಶ್ರದ್ಧೆಗಳಿಂದ ಹಾಡುವುದು ಮತ್ತು ಜನಸಾಮಾನ್ಯರಿಗೆ ಲೇಸುಂಟಾಗಲೆಂಬ ತವಕದಿಂದ ಜ್ಞಾನ–ಭಕ್ತಿ–ವೈರಾಗ್ಯ ಪರವಾದ ಹಾಡುಗಳನ್ನು ರಚಿಸಿ ಹಾಡುವುದು. ಕೀರ್ತನಗಳಲ್ಲಿ ವೇದಾಗಮಪುರಾಣೋ ಪನಿಷತ್ತುಗಳ ಮಹಾವಾಕ್ಯಗಳು ಔಚಿತ್ಯಪೂರ್ಣವಾಗಿ ಬೆರೆತಿರುತ್ತವೆ. ಇಂತಹ ಕೀರ್ತನೆಗಳ ಸಂಗೀತವೂ, ಲಯವೂ ಸುಲಭವಾಗಿರುತ್ತವೆ. ಈ ಕೀರ್ತನೆಗಳಲ್ಲಿ ಸಾಮಾನ್ಯವಾಗಿ ಸಂಗೀತವು ಸಾಹಿತ್ಯಕ್ಕೆ ವಿಧೇಯ. ಆದ್ದರಿಂದಲೇ ಹೆಚ್ಚು

ಸಂಗತಿಗಳ ಭಾರವನ್ನು ಕೀರ್ತನೆಗಳು ತಡೆಯಲಾರವು. ನೆರವಲ್ ಮತ್ತು ಸ್ವರ ವಿನ್ಯಾಸವೂ ಸಾಮಾನ್ಯವಾಗಿ ಅನುಚಿತವೇ. ಕೀರ್ತನೆಗಳಲ್ಲಿ ಪಲ್ಲವಿಯ ನಂತರ ಅನು ಪಲ್ಲವಿಯ ಭಾಗವಿರಲೇಬೇಕೆಂಬ ನಿರ್ಬಂಧವೇನಿಲ್ಲ. ಅನೇಕ ಚರಣಗಳಿರುತ್ತವೆ. ಈಗ ಈ ಹರಿದಾಸರ ರಚನೆಗಳನ್ನು ಅವರ ಕಾಲದಲ್ಲಿ ರೂಢಿಯಲ್ಲಿದ್ದು ಪ್ರಸಿದ್ಧವಾಗಿದ್ದ ರಾಗಗಳಲ್ಲೇ ಹಾಡಿದರೆ ಬಹಳ ಚೆನ್ನು. ಮನಸ್ಸಿಗೆ ಬಂದ ರಾಗಗಳಲ್ಲಿ, ಸರಿಹೋಗದ ಮಟ್ಟು ಮತ್ತು ತಾಳಗಳಲ್ಲಿ ದೇವರನಾಮಗಳನ್ನು ಹಾಡಬಾರದು. ಇದು ಅಪಚಾರವೇ ಸರಿ. ಹರಿದಾಸರು ಹಾಡಿದ ರೀತಿ ನಮಗೆ ಲಭ್ಯವಿಲ್ಲದಿದ್ದರೂ, ಸಾಹಿತ್ಯಭಾವದಿಂದ ಅವುಗಳ ಲಯ ಮತ್ತು ಹಾಡುವ ಧಾಟಿಯನ್ನು ಸ್ಥೂಲವಾಗಿ ತಿಳಿಯಬಹುದು. ಅನೇಕ ದೇವರನಾಮಗಳ ಮಟ್ಟುಗಳು ಕರ್ಣ ಪರಂಪರೆಯಿಂದ ಉಳಿದುಬಂದಿವೆ. ಅವುಗಳನ್ನಾದೂ ಹಾಗೆಯೇ ಉಳಿಸಿಕೊಳ್ಳಬೇಕು.

ಈ ಕನಕ ಸಂಪುಟದ ಮೊದಲನೇ ಕೀರ್ತನೆ '' ನಮ್ಮಮ್ಮ ಶಾರದೆ '' ಇದೊಂದು ದೇವತಾ ಪ್ರಾರ್ಥನಾ ರೂಪವಾದ ಹಾಡು. ವಾಸ್ತವವಾಗಿ ಇದು ಗಣಪತಿಯ ಪ್ರಾರ್ಥನೆ. ಈ ಗಣಪತಿಯು ಎಲ್ಲ ದೇವ–ದೇವಿಯರಲ್ಲೂ ಅಂತರ್ಗತನಾಗಿರುವವನು. ಈ ಕೀರ್ತನೆಯ ರಾಗ–ಮೋಹನ. ತಾಳ ಮಿಶ್ರಛಾಪು–ಮಧ್ಯಮ ಕಾಲ. ಮೋಹನ ರಾಗವು ಬಹು ರಮಣೀಯವಾದ, ನವರಸಭರಿತವಾದ ಮತ್ತು ಸರ್ವತೋಮುಖವಾದ ರಕ್ತಿರಾಗ. ಶೃಂಗಾರ, ಕರುಣಾ, ಭಕ್ತಿ ಮತ್ತು ದೈನ್ಯರಸಗಳು ಈ ರಾಗದಲ್ಲಿ ಆವಿರ್ಭವಿಸುತ್ತವೆ. ವರ್ಣನೆ, ಶ್ಲೋಕ, ಪದ್ಯಗಳನ್ನು ಹಾಡಲು ಈ ರಾಗ ಎತ್ತಿದ ಕೈ. 2ನೇ ಕೀರ್ತನೆಯೂ ಮತ್ತೊಂದು ದೇವತಾ ಪ್ರಾರ್ಥನೆ. ಈ ಕೀರ್ತನೆಯ ರಾಗ ಆರಭಿ, ತಾಳ ಆದಿ. ಶ್ಲೋಕ, ಪದ್ಯ, ವೃತ್ತ, ಆರಂಭದ ಕೀರ್ತನೆಗಳು, ದರು ಮೊದಲಾದವು ಈ ರಾಗದಲ್ಲಿ ಸೊಗಸು. ಆರಭಿ ರಾಗದಲ್ಲಿ ವೀರ, ಅದ್ಭುತ ಮತ್ತು ಶೃಂಗಾರ ರಸಗಳು ನಿಷ್ಪತ್ತಿಯಾಗುತ್ತವೆ. ಘನರಾಗ ಪಂಚಕಗಳಲ್ಲಿ ಒಂದು. '' ಶಿವ ಶಿವ ಶಿವ ಯೆನ್ನಿರೋ ಮೂಜಗದವರೆಲ್ಲ '' 3 ನೇಯದು, ಸಾವೇರಿ ರಾಗದ '' ಶೇಷಶಯನ ನಿನ್ನ '' ಎಂಬ ಕೀರ್ತನೆ. ಈ ರಾಗ ಕರ್ಣಾಟಕ ಸಂಗೀತದ ಪ್ರಾಚೀನ ರಕ್ತಿರಾಗಗಳಲ್ಲಿ ಒಂದು. ಈ ರಾಗದಲ್ಲಿ ಭಕ್ತಿಭಾವಗಳು ದೈನ್ಯ ಮತ್ತು ಶಾಂತಿರಸಗಳಲ್ಲಿ ಮುಕ್ತಾಯವಾಗುತ್ತವೆ. ಕೀರ್ತನೆಯ ತಾಳ ಮಿಶ್ರಛಾಪು. ಶ್ರೀ ಕನಕದಾಸರು ಪರಮ ಭಾಗವತರನ್ನು ಹೆಸರಿಸುವ ಬಗೆ ಬಹಳ ಚೆನ್ನು. ಈ ಕೀರ್ತನದಲ್ಲಿ ಹರಿದಾಸಮಹತಿಯನ್ನು ಎತ್ತಿ ಹಿಡಿದಿದ್ದಾರೆ.

ಮುಂದಿನದು '' ಎಳ್ಳು ಕಾಳಿನಷ್ಟು ಭಕ್ತಿ '' ಎಂಬ ತೋಡಿ ರಾಗದ ಕೀರ್ತನೆ– ರೂಪಕತಾಳ. ತೋಡಿರಾಗವು ಅದ್ಭುತವಾದ ಒಂದು ರಕ್ತಿ ರಾಗ. ಕರುಣಾ

ವೀರಾದ್ಭುತರಸಯುಕ್ತವಾದ ರಾಗ. ಅಖಂಡವಾದ ವಿಸ್ತಾರವುಳ್ಳ ರಾಗ. ಈ ಕೀರ್ತನೆಯಲ್ಲಿ ಭವದುಃಖ ಕಾತರತೆಯನ್ನು ದಾಸರು ಒಳ್ಳೆ ಉದಾಹರಣೆ ಮತ್ತು ಸಾಮ್ಯಗಳಿಂದ ಹೇಳುತ್ತಾರೆ.

ವರಾಳಿರಾಗ ಒಂದು ಕ್ರಿಯಾಂಗ ರಾಗ. ಭಕ್ತಿರಸಭಾವಗಳು, ದೈನ್ಯಶೋಕರಸಗಳೂ ಈ ರಾಗವಲ್ಲಿ ನಿಷ್ಪತ್ತಿಯಾಗುತ್ತವೆ. ಈ ರಾಗವಲ್ಲಿ ''ಸಾಕುಸಾಕು ಮನುಜಸೇವೆಯು'' ಎಂಬ ಕೀರ್ತನೆ ರೂಪಕ–ತಾಳ. ಇದು ಭಕ್ತಿ ಸಾಧನೆಗೆ ಸಂಬಂಧಪಟ್ಟ ಕೀರ್ತನೆ.

ಸಹಜವಾಗಿಯೇ ಕರುಣಾರಸ ಪ್ರಧಾನವಾದ ಹಿಂದೋಳ ರಾಗವಲ್ಲಿ ಶಾಂತ ದೀನರಸಗಳೂ, ದುರಿತಕಾಲದಲ್ಲಿ ಜಂಟಿ ಮತ್ತು ದಾಟು ಸ್ವರ ಪ್ರಯೋಗಗಳಿಂದ ವೀರ ಮತ್ತು ಅದ್ಭುತ ರಸಗಳು ನಿಷ್ಪತ್ತಿಯಾಗುತ್ತವೆ. ಇದೊಂದು ಸಾಯಂಕಾಲಿಕ, ರಕ್ತಿ ರಾಗ. ಈ ರಾಗದಲ್ಲಿ ''ಕೀರ್ತನೆಯ ಮಾಡಿ'' ಎಂಬ ಹಾಡು ಖಂಡಛಾಪು ತಾಳದಲ್ಲಿದೆ.

ಮುಂದಿನದು ಸರ್ವಸ್ವರಗಮಕಯುಕ್ತ, ಸರ್ವರಸಪೋಷಿತ, ಸರ್ವಾಂಗಸುಂದರ ಸರ್ವತೋಮುಖ ವ್ಯಾಪ್ತಿಯುಳ್ಳ ಸಮುದ್ರದಂತಹ ರಾಗವಾದ ಶಂಕರಾಭರಣ ರಾಗದಲ್ಲಿ ''ಹೇಗೆ ನೀ ದಾಸನಾದೆ'' ಎಂಬ ಕೀರ್ತನೆ, ಮಿಶ್ರ ಛಾಪು ತಾಳ. ರಾಜ ರಾಗವಾದ ಶಂಕರಾಭರಣ ರಾಗದಲ್ಲಿ ಶೃಂಗಾರ ರಸವೇ ಪ್ರಧಾನ. ಇದೊಂದು ಗಂಭೀರಗತಿಯುಳ್ಳ ರಾಗ. ಈ ಕೀರ್ತನೆಯಲ್ಲಿ ಹರಿದಾಸನಾಗುವವನಿಗೆ ಯೋಗ್ಯವಲ್ಲದ ನಮ್ಮಲ್ಲಿರುವ ದೋಷಗಳನ್ನು ಎತ್ತಾಡಿ ಹರಿದಾಸಮಹತಿಯನ್ನು ಹೇಳುತ್ತಾರೆ.

ಕಡೆಯದಾಗಿ ಮಧ್ಯಮಾವತಿ ರಾಗದಲ್ಲಿ ಭಕ್ತಿಸಾಧಕವಾದ ಒಂದು ಕೀರ್ತನೆ ''ನಾರಾಯಣ ನಮೋ''- ಮಿಶ್ರಛಾಪು. ಮಧ್ಯಮಾವತಿಯು ಭಕ್ತಿರಸಪ್ರಧಾನವಾದ ಮಂಗಳಮಯವಾದ ಒಂದು ಪ್ರಾಚೀನ ರಾಗ.

---

# 1. ದೇವತಾ ಪ್ರಾರ್ಥನೆ

ರಾಗ : ಮೋಹನ                ತಾಳ : ಮಿಶ್ರ (ಮಧ್ಯಮ ಕಾಲ)

ಪ॥ ನಮ್ಮಮ್ಮ ಶಾರದೆ ಉಮಾ ಮಹೇಶ್ವರಿ ।
ನಿಮ್ಮೊಳಗಿಹನಾರಮ್ಮಾ

ಅ॥ ಕಮ್ಮಗೋಲನ ವೈರಿಸುತನಾದ ಸೊಂಡಿಲ ।
ಹೆಮ್ಮೈಯ್ಯ ಗಣನಾಥನೆ ॥

ಚ॥ ಮೋರೆ ಕಪ್ಪಿನ ಭಾವ ಮೊರದಗಲದ ಕಿವಿ ।
ಕೋರೆದಾಡೆಯನಾರಮ್ಮ ॥
ಮೂರು ಕಣ್ಣಿನ ಸುತ ಮುರಿದಿಟ್ಟ ಚಂದ್ರನ ।
ಧೀರ ತಾ ಗಣನಾಥನೆ ॥೧॥

ಉಟ್ಟ ಪಟ್ಟೆಯ ಬಿಗಿದುಟ್ಟ ಚೆಲ್ಲಣದ ।
ದಿಟ್ಟ ತಾನಿವನಾರಮ್ಮ ॥
ಪಟ್ಟದರಾಣಿ ಪಾರ್ವತಿಯ ಕುಮಾರನು ।
ಹೊಟ್ಟೆಯ ಗಣನಾಥನೆ ॥೨॥

ರಾಶಿವಿದ್ಯೆಯ ಬಲ್ಲ ರಮಣಿ ಹಂಬಲನೊಲ್ಲ ।
ಭಾಷಿಗನಿವನಾರಮ್ಮ ॥
ಲೇಸಾಗಿ ಜನರ ಸಲಹುವ ಕಾಗಿನೆಲೆಯಾದಿ ।
ಕೇಶವದಾಸಕಾಣೆ ॥೩॥

ಪ॥ ಗಾ॰ಗಾಗಾ ॥ ಗಾ॰ಗಾಗಾ॥ ॥ ರಿಗಾಪಾಪಾ ॥ ಗದಪಗರಿಸಾ ॥
1. ನಮ್ಮಮ್ಮ ॥ ಶಾ ರ ದೆ ॥ ಉ–ಮಾಮ ॥ ಹೇ–ಶ್ವ–ರಿ ॥
ಸಾ॰ರೀ॰ಧೇ॰ ॥ ಸರೀ॰ಗಾಪ ॥ ಗರೀ॰ಸಾಸಾ ॥ ಸಾ॰ಗರಿಸರಿ ॥
ನಿ ಮ್ಮೊ ಳ ॥ ಗಿಹನಾರ ॥ ಮ್ಮಾ – – ॥ – – ॥

2. ಗಾ॰ಗಾಗಾ ॥ ಪದಪಗರಿಗಾ ॥ ಪದಾ ಸೇ॰ದಪ ॥ ,, ,, ॥
ನಮ್ಮಮ್ಮ ॥ ಶಾ–ರ–ದೆ ॥ ಉ–ಮಾಮ ॥ ಹೇ ಶ್ವ ರಿ ॥
ನಿ ಮ್ಮೊ ಳ ॥ ಗಿಹನಾರ ॥ ಮ್ಮಾ – – – –

ಅ॥ಪ॥ ಗಾ॰ಪಾದಾ ॥ ಸೆದಾ ಸೇ॰ಸೇ॰ ॥ ಸರೀ॰ಗೇ॰ರೀ॰ ॥ ಸೇ॰ದಪದಾ ॥
ಕೆ–ಮ್ಮಗೋ॰ ॥ ಲನವ್ಯೆರಿ ॥ ಸು ತ ನಾ ದ ॥ ಸೊ ೦ ಡಿ ಲ ॥
,, ॥ ,, ॥ ಸರೀ॰ಗಪಗರಿ ॥ ,,
,, ॥ ,, ॥ ಸು ತ ನಾ ದ ॥ ,,
ಸೇ॰ದಾಪಾ ॥ ಪಗಾಪಾದಾ ॥ ಸೇ॰ ೯೯ ೯೯ ॥ ಸೆದಪಗರಿಸರಿ ॥
ಹೆಮ್ಮೈಯ್ಯ ॥ ಗ ಣ ನಾಥ ॥ ನೆ – – – ॥ – – – – – – ॥

– ನಮ್ಮಮ್ಮ

(ಪಲ್ಲವಿ/ಅನುಪಲ್ಲವಿಯ ಧಾಟಿಯಲ್ಲಿ ಚರಣಗಳನ್ನು ಹಾಡಬೇಕು)

# 2. ಶಿವ ಶಿವ ಶಿವ ಎನ್ನಿರೋ

ರಾಗ : ಆರಭಿ — ಆದಿ ತಾಳ

ಪ॥ ಶಿವ ಶಿವ ಶಿವ ಎನ್ನಿರೊ – ಮೂಜಗದವರೆಲ್ಲ ।
ಶಿವ ಶಿವ ಶಿವ ಎನ್ನಿರೊ ॥

ಚರಣ ಆಗಮ ಸಿದ್ಧಾಂತ ಮೂಲದ ಜಪವಿದು – ನಿಮ್ಮ
ರೋಗದ ಮೂಲವ ಕೆಡಿಪ ಔಷಧವಿದು ॥ ೧ ॥

ಮನುಜಜನ್ಮದಿ ಹುಟ್ಟಿ ಮೈಮರೆದಿರಬೇಡಿ – ನಿಮ್ಮ
ತನು ಮನ ಪ್ರಾಣವ ವ್ಯರ್ಥವ ಮಾಡದೆ ॥ ೨ ॥

ಭುವನಕೆ ಬಲ್ಲಿದರಾಗಬೇಕಾದರೆ – ನೀವು
ಭವನಪದವಿಯನು ಪಡೆಯಬೇಕಾದರೆ ॥ ೩ ॥

ಪೃಥ್ವಿಗೆ ಸದ್ಗುರುವಾಗಬೇಕಾದರೆ – ನೀವು
ತತ್ವಪತಿ ಆದಿಕೇಶವನ ಕೂಡಬೇಕಾದರೆ ॥ ೪ ॥

ಪ॥ ; ಪಪಾಪಪಾ ಷಪಮಗ ರಿ ರಿ । ಸೇ , , । ಸಾರಿರಿಸನಿಧಸ ॥ ರಿಮ
– ಶಿವ ಶಿವ ಶಿ -ವ ಎನ್ನಿ । ರೊ । ಮೂಜಗದವರೆ ॥ –ಲ್ಲ

೨ , , ಮಷಧಪಮಗ ,, । ,, । ಧಾಪಪಮಗರಿಸ ॥ ರಿಮ
, , ಶಿ ವ । ,, । ಮೂಜಗದವರೆ -॥ -ಲ್ಲ

೩ ಪಾದಸೆದಪಾ ದಪಮಗರಿಸರಿಪ । ಮ ಗ ರೀ ; । ಸೆನಿದಪಮಗರಿಸ ॥ ರಿಮ
ಶಿ ವ ಶಿ ವ ಶಿ ವ ಎ ನ್ನಿ । ರೊ – । ಮೂಜಗದವರೆ ॥ ಲ್ಲ

೪ ,, ,, । , , । ರಿರಿಸನಿದಪಮಗ ॥ ರಿಮ
,, ,, । , . । ಮೂ ಜಗದವರೆ ॥ -ಲ್ಲ

ಪರೀಮಪಾ ದಪಮಗ ರಿರಿ । ಸಾ ॰ ॰ । ಸಾ ॰ ॰ ॥
ಶಿವ ಶಿವ ಶಿ -ವ -ಎನ್ನಿ । ರೋ – । – ॥

ಚರಣಗಳು

೧ ;, ಮಾಗರೀ ಮಾ,ಪಾ,ದಾ । :, ಸೇ ನಿದು । ಸ ಸ ಸ ಸ ॥
ಆಗಮ ಸಿ -ದ್ಧಾ ೦ ತ । ಮೂಲದ । ಜ ಪ ವಿ ದು ॥

೨ ಸನಿದಪಮಗರೀ , , । , , । ರಿ ಸೇ ರಿ ರೇ ಸ ॥
ಆ -ಗ- ಮ , , । , , । ಜ ಪ ವಿ ದು ನಿ ॥

೧ ಸನಿ ದರೀಸಸೇ ಸನಿದಾ ನಿದಪಾ । ,ಮಪದಸಪಾ । ದಪಮಗರಿಸರೀ ॥
ಮ್ಮ ರೋಗದ ಮೂಲ ವ । ಕೆ ಡಿ ಪ ಔ । ಷ -ಧ -ವಿ -ದು ॥

೨ ;,ದರಿಸರೀ ರಿಸನಿದನಿದಪಾ । ಮಪದರಿಸನಿದಪ । ಪಪಮಗರಿಸರಿಮ ॥
ರೋಗದ ಮೂ ಲ ವ । ಕೆ ಡಿ ಪ ಔ । ಷ ಧ ವಿ ದು ॥

(ಶಿವ ಶಿವ)

ಮಗಾರಿ ಮಾಪಮಾ ಪಾದಾ । ;, ಸಾ ಸ ಸಾ । ನಿ ದಾ ಸಾ ಸಾ ॥
ಮನು ಜ ನ್ಮ ದಿ ಹು ಟ್ಟಿ । ಮೈ ಮ ರೆ । ದಿ ರ ಬೇ -ಡಿ ॥

ಸನಿದಪಮಗರೀಪಮಾಪಾ,ದಾ । , , । ನಿ ದ ರಿ ಸ ರೀ ಸ ॥
ಮ ನು ಜ ಜ ನ್ಮ ದಿ ಹು ಟ್ಟಿ । , , । ದಿ ರ ಬೇ -ಡಿ ನಿ ॥

೧ ಸನಿ ದರೀಸಸೇ ಸನಿದಾನಿದಸ । ; , ಪಾ ದ ಪಾ । ದಪಮಗರಿಸರೀ ॥
ಮ್ಮ ತನುಮನ ಪ್ರಾ--ಣ ವ । - ವ್ಯರ್ಥವ । ಮಾ -ಡ -ದೆ ॥

2ನೇ ಸಂಗತಿಯನ್ನು ಹಾಡುವುದು (ಶಿವ ಶಿವ)

; ಮಮಾಗರೀ ಮಾಪದ । ಸೇ ಸ ಸ । ಸ ನಿ ದಾ ಸ ಸ ॥
ಭು ವ ನ ಕೆ ಬ ಲ್ಲಿ ದ । ರಾ ಗ ಬೇ । ಕಾ ದ ರೆ ॥

ಸನಿದಪಮಗರೀ , , । ದಸರೀಮರಿಸನಿದಾ । ರಿ ಸಾ ರಿ ರೇ ಸ ॥
ಭು ವ ವ ಕೆ , , । ರಾ ಗ ಬೇ । ಕಾ – ದ ರೆ ॥ ನೀ

ಸನಿ

ವು ಭವನಪದವಿಯನು । , ಪಡೆಯಬೇ । ಕಾ ದ ರೆ ॥
, , ಪೃಥ್ವಿ ಗೆ ಸದ್ಗುರು । ವಾ ಗ ಬೇ । ಕಾ ದ ರೆ ನೀ ವು ॥

,ದರೀಸಸೇ ಸೇ,ನಿದದಸದ । ಪಾಮಪಾದಸಪಾ, ।
ತತ್ವಪತಿ ಆದಿಕೇ-ಶವನ । ನ ಕೂ ಡ ಬೇ । ಕಾ ದ ರೆ – ಶಿವ ಶಿವ

# 3. ಭಕ್ತಿ ಸಾಧನೆ

ಗರಾ: ವರಾಳಿ                                    ತಾಳ : ರೂಪಕ

ಪ ॥ ಸಾಕು ಸಾಕು ಮನುಜ ಸೇವೆಯು
ಮಾಡಿ ಬೆಂದು ಬಳಲಿದೆನೊ ॥

ಅ ॥ ಬೇಕು ನಿನ್ನ ಪಾದ ಭಜನೆ
ಯೆಂದು ಬಯಸುತಿಹೆನು ರಂಗ ॥

ಚ ॥ ಸ್ನಾನ ಸಂಧ್ಯಾನನೇಮ ನಿತ್ಯ ಜಪಗಳನ್ನೇ ಜರೆದು ॥
ಹೀನನಾಗಿ ಕೆಟ್ಟ ಜನರ ಮನೆಯ ಸೇರುವೆನೋ ದಣಿದು
ಶ್ವಾನನಂತೆ ದಿನವ ಕಳೆವೆ ದುರಾಸೆಗಾಗಿ
ಮಾನ ಬಿಟ್ಟುಕೊಂಡು ಕುದಿವೆನೊ ಕಡೆಯಲ್ಲಿ ಎಳ್ಳ
ಮೊನೆಯಿನಿತು ಸುಖವ ಕಾಣೆನೊ ರಂಗಯ್ಯ ॥೧॥

ಒಡಲ ಆಸೆಗಾಗಿ ನೊಣವುಕೊಡದ ಜೇನಿನಲ್ಲಿ ಬಿದ್ದು
ತೊಡಕಿದಂತೆ ಪಾಶದಲ್ಲಿ ಬಿದ್ದು ಬಾಯಬಿಡುತಲಿಹೆನು
ಬಿಡಿಸೊ ಎನ್ನ ಬಂಧ ಪಾಶವ – ಪೊಡವಿ
ಗೊಡೆಯ ನಾರಸಿಂಹ ಮಾಧವ – ಹೇಬಿಸುರುಹಾಕ್ಷ
ಒಡೆಯ ಬಾಡದಾದಿ ಕೇಶವ ರಂಗಯ್ಯ ॥೨॥

ಪ॥ , ಗ ಗ ಗಾ ಗ ॥ , ಗಪಾಮ ಗಾ,ರಿಸಾ ॥ , ಗರಿ ಸ ರಿ ಗಾ ರಿ ॥
ಸಾಕು ಸಾಕು ॥ ಮ ನು ಜ ಸೇ ವೆ ಯು ॥ – ಮಾ ಡಿ ಬೆಂ ದು
, ಸ ನ಼ಿ ೯ ಧ಼ ನ಼ಿ ೯ ಸಾ ॥
– ಬ ಳ ಲಿ ದೆ ನೊ ॥

೨ -ಗ ರಿ ಗಾ ಮ ॥ ಪಮನಿದಪಮ ಗಾ , ರಿ ಸಾ ॥ , ,
ಸಾ ಕು ಸಾ ಕು ॥ ಮ -ನು -ಜ ಸೇ -ವೆ ಯು ॥ , ,
೩ ಗರಿಗಮಪದನೀ ॥ ಸನಿದನಿದಪಮಾ ಗಾ,ರಿಸಾ ॥ , ,
ಸಾ ಕು ಸಾ ಕು ॥ ಮ -ನು -ಜ ಸೇ ವೆ ಯು ॥ , ,

ಅ॥ ;,ಪಾಮಪಾದ ॥ ಸ ನಿ ದಾ ನೀ ಸ ಸ ಸ ॥ ಗೇ ರಿ ಸ ರಿ ಗೇ ರಿ ॥
ಬೇಕು ನಿನ್ನ ॥ ಪಾ - ದ ಭ ಜ ನೆ ॥ ಯೆಂದು ಬ-ಯಸು ॥
ಸ ನಿ ದಾ ನೀ ಸೇ ಸ ॥
ತಿ -ಹೆ ನು ರಂ ಗ ॥

೨ ,. ॥ ಸ ನಿ ದಾ ನೀ ಸ ರಿ ಗ ॥ ರಿ ಸ ನಿ ದ ಪ ದ ॥
,, ॥ ಪಾ - ದ ಭ ಜ ನೆ ॥ ಯೆಂದು ಬಯಸು ॥
ಸನಿದಾಪಮಗಾ,ರಿ ಸ ॥
ತಿ - ಹೆ ನು ರಂ ಗ ॥ ಸಾಕು ॥

ಚ॥ ;.ಪಾದ ಪಾ ॥ ಪಾ ಪ ಮ ಪ ದ ಪ ದಾ ॥ ;, ಪಾ ಮ ಪ ದ ಪ ॥
ಸ್ನಾ ನ ಸಂ ॥ ಧ್ಯಾ ನ ನೇ – ಮ ॥ ನಿ ತ್ಯ ಜ ಪ ಗ ॥
ಪಮನಿದಪಮ ಗರಿಸ ॥
ಳ – – ನ್ನೆ ಜ ರೆ ದು ॥

, ಗರಿ ಸರಿಗಾರಿ ॥ ಸಾ ನಿ ಧ ನಿ ಸ ॥ 'ಗ ಗಾ ರಿ ಗಾ , ಗ ಮಾ ॥
ಹೀನನಾ – ಗಿ ॥ ಕೆ ಟ್ಟ ಜ ನ ರ ॥ ಮ ನೆ ಯ ಸೇ ರು ವೆ ॥
ಪಾ , ಪಮನಿದಪಾ ॥
ನೊ ದ ಣಿ ದು ॥

, ನಿದಪಾದ ॥ ನಿದನಿಸಸಸ ॥ ಸೇ;,ಸರಿ ॥ ಸ ನಿ ದಾ ನೀ ಸೇ ಸ ॥
ಶ್ವಾ ನ ನ ಂ ತೆ ॥ ದಿನವಕಳೆವೆ ॥ – – ದು ॥ ರಾ – ಸೆ ಗಾ ಗಿ ॥
, ಗರಿಸರಿಗೇರಿ ॥ ಸನಿಗರಿಸನಿ ದನೀಸಸೇ ॥ ಸೇ ; , ಸ ಸ ॥
ಮಾನಬಿ -ಟ್ಟು ॥ ಕೊಂಡು – ಕುದಿವೆನೊ ॥ – – ಕಡೆ ॥

ಸ ನಿ ದಾ ಪ ಪ ಮ ಗಾ ಮ ॥ , ಪ ದಾ ನಿ ದಾ ಪಾ ॥
ಯ ಲ್ಲಿ ಎ ಳ್ಳ ॥ ಮೊ ನೆ ಯಿ ನಿ ತು ॥

ಪ ಮ ನಿ ದ ಪ ಮ ಗಾ ರಿ ॥ ಸಾ ,, ,, ॥ ರಿಸನಿದಪಮ ಗಾರಿಸಾ ॥
ಸು ಖ ವ ಕಾ ಣೆ ॥ ನೊ ॥ ರಂ ಗ ಯ್ಯ ॥

# 4. ಶೇಷಶಯನ ನಿನ್ನ

ರಾಗ : ಸಾವೇರಿ    ತಾಳ : ಮಿಶ್ರಛಾಪು

ಪ॥ ಶೇಷಶಯನ ನಿನ್ನ ಭಾಗವತರ ಸಹ
ವಾಸದೊಳಿರಿಸು ಕಂಡ್ಯ ಎನ್ನನು ॥

ಅ॥ ಬೇಸರಿಯದೆ ನಿನ್ನ ಹೃದಯಾಬ್ಜದೊಳಗಿಡುವ
ದಾಸರೊಳಿರಿಸು ಕಂಡ್ಯ ಎನ್ನನು ॥

ಚರಣ॥ ತಂದೆಯೊಡಲನು ಸೀಳಿಸಿದವರೊಳು ದೇ-
ವೇಂದ್ರನ ತಲೆಗೆ ತಂದವರೊಳು ದು-
ರ್ಗಂಧ ಪೆಣ್ಣಿಗೆ ಚಂದನದ ಕಂಪನಿತ್ತಂಥ
ಬಾಂಧವರೊಳಗಿರಿಸು ಕಂಡ್ಯ ಎನ್ನನು ॥ ಶೇಷ ॥

ಕಾಟಿಗೆ ಕಾಸು ಕಾಣದರು, ರಾಯರ ಪಂಕ್ತಿ
ಯೂಟ ಬಯಸಿದಂತೆ ನಾ ಬೇಡಿದೆ ।
ನಾಟಕಧರ ಕಾಗಿನೆಲೆಯಾದಿ ಕೇಶವ ನಿ-
ನ್ನಾಟದೊಳಿರಿಸು ಕಂಡ್ಯ ಎನ್ನನು ॥ ಶೇಷ ॥

ಪ ॥ ,ಸರಿಮಾಮಾ ॥ ಪಮಾ ಪಪಪಾ ॥ ;ಪಮುಪಾದಾ ॥ ಪಾಽನಿಪಾಮು ಗಸರೀ ॥
-ಶೇ - ಷ ಶ ॥ ಯನ ನಿ -ನ್ನ ॥ - ಭಾ - ಗ ವ ॥ ತ ರ ಸ ಹ
-ಸ ರಿ ಗ ಸ ರಿ ೯ ॥ ಸಸಾಽಸನಿದಾರಿಸ॥ ರೀಽಽಮುಪಾದಪಮು॥ ಗಾ ರಿ ಗ ರಿ ಸಾ ॥
-ವಾ - ಸ - ದೊ ॥ ಳಿ ರಿ ಸು ಕಂ ॥ ಡ್ಯ - ಎ - ನ್ನ - ॥ ನು – – – ॥

೨ ,ಸರಿ ಮುಪದಾ ಪಾ ॥ ಪದನಿದಪಮು ದಪದಾ ॥ ;ಪಮುಪದಸೀಸನಿದಾ ॥
-ಶೇ - ಷ - ಶ ॥ ಯ - ನ - - ನಿ ನ್ನ ॥ ಭಾ – ಗ – ವ ॥ ತರಸಹ ॥
-ಸರಿಪಮುಗರಿ ರಿಸ ॥ ,, ॥ ರೀಽಮುಪಸಾನಿದಪಮಾ ॥
–ವಾ -ಸ - -ದೊ ॥ ಳಿ ರಿ ಸು ಕಂ ॥ ಡ್ಯ ಎ – – ನ್ನ – ॥ ನ

ಅ ॥ ;ಪಮುಪಾದಾ ॥ ಸ ಸೇ ಸೇ ಸೇ ॥ ,ಸಸ ರಿಗಾರಿ ಸೇ ॥ ಸರಿಗಸೇ , ನಿಪದಾ ॥
ಬೇ - ಸ ರಿ ॥ ಯದೆ ನಿ ನ್ನ ॥ -ಹೃದಯಾ ಬ್ಜ ॥ ದೊ - ಳ ಗಿಡುವ ॥
೨ ಪನಿದಪದಮು ಪದ ॥ ,, ॥ ,ಪದ ಸರಿಗೇರಿಸ ॥ ,, ॥
-ಬೇ - ಸ - - ರಿ – ॥ ,, ॥ ಹೃದಯಾ– ಬ್ಜ ॥ ,, ॥
೩ ಪದರಿಸನಿದನಿದಪಮು ॥ ,, ॥ ,, ॥ ,, ॥
ಬೇ -ಸ -ರಿ - - ॥ ,, ॥ ,, ॥ ,, ॥
ಪದ ಸೇ ಸೇ ॥ ಸೇಽಸನಿದಾ ನಿದಪಮುಪಾ'ದ ॥ ಸೇಽಮುಪಾದಪಮು ॥ ಗಾರೀ ಗರಿಸಾ ॥
-ದಾ –ಸ ರೊ ॥ ಳಿ ರಿ– – ಸು - – ಕಂ ॥ ಡ್ಯ – ಎ - ನ್ನ – ॥ ನು - ॥
( ಶೇ ಷ )

ಚ ॥ ; ಪ ಪಾ ಪ ಪ ॥ ಪಮಾದಪದಾ ॥ ಪಮಾಪಾದಾ ॥ ಪಾ,ದಪಮುಗಸರೀ ॥
– ತಂದೆಯೊಡ ॥ ಲನು ಸೀ – ಳಿ ॥ ಸಿ ದ ವ ರೊ ॥ ಳು – – ದೇ- - ॥
, ಸಾ ರಿಗರೀಸಾ ॥ ಸಸನಿದ್ಧೇ ರಿಸರೀ ॥ , ಸಾರಿಮುಪಾ ॥ ಪದನಿದೆಪಮುದಪದಾ ॥
- ವೇಂದ್ರ -ನ ॥ ತ ಲೆ - ಗೆ -- ॥ ತ ಂ ದ – ವ ॥ ರೊ – ಳು – ದು ॥
. ಪಮುಪಾದಾ ॥ ಸಸೇಸೇಸೇ ॥ ಪದಾಸರಿಗೇರಿಸ ॥ ಸೇದಸರಿಸೇರಿ ಸನಿಪಾದಾ
ಗ ರ್ ಂ ಧ ಪೆ ॥ ಣ್ಣೆಗೆಚಂದ ॥ ನದ ಕಂ - - ಪ ॥ ನಿ – – ತ್ತ ಂ ಥ ॥
, ಪದ ಸಸಸಸ ॥ ಸಸನಿದಾ ನಿದಪಮು ಪಾ,ದ ॥ ರೀ ,,
ಬಾಂಧವರೊಳ ॥ ಗಿರಿ – ಸು – – ಕಂ ॥ ಡ್ಯ – – ಎ ನ್ನ ನು
( ಶೇ ಷ )

— ಇದರಂತೆ ಮಿಕ್ಕ ಚರಣಗಳು —

# 5. ಎಳ್ಳು ಕಾಳಿನಷ್ಟು ಭಕ್ತಿ

ರಾಗ : ತೋಡಿ                    ತಾಳ : ರೂಪಕ

ಪ ॥ ಎಳ್ಳು ಕಾಳಿನಷ್ಟು ಭಕ್ತಿ ಎನ್ನೊಳಗೆ ಇಲ್ಲವಯ್ಯ ।
ಕಳ್ಳರಿಗೆ ಕಳ್ಳನಂತೆ ಬೆಳ್ಳಕ್ಕಿಯಂದದಿ ಡಂಭ ॥

ಚ ॥ ಗಂಡು ಮುಣುಗಿನ ಹಕ್ಕಿಯಂತೆ ಕಂಡಕಂಡ ನೀರ ಮುಳುಗಿ ।
ಮಂಡೆಶೂಲೆ ಬಾಹುದೈಸೆ ಗತಿಯು ಕಾಣೆನೊ ॥
ಮಂಡುಕನಂದದಿ ಕೆರೆಯ ದಂಡೆಯಲ್ಲಿ ಕುಳಿತುಕೊಂಡು
ಮಂಡೆ ಮುಸುಕನಿಟ್ಟು ಮೂಗಹಿಡಿವ ಭ್ರಮಿತ ನಾನಯ್ಯ ॥೧॥

ಗಾಣದೆತ್ತಿನಂತೆ ಕಣ್ಣ ಮುಚ್ಚಿ ಪ್ರದಕ್ಷಿಣೆಯ ಮಾಡಿ ।
ಕಾಣದೆ ತಿರುಗುವೆನು ಎರಡು ಕಣ್ಣಿದ್ದು ನಾನು ॥
ಮಾಣಿಕ್ಯದ ರಾಶಿಯಲ್ಲಿ ಅಂಧಕರೈವರ ಕೂಡಿ
ಆಣಿಮುತ್ತ ಹಿಡಿದು ಹಿಡಿದು ಬಿಡುವ ಭ್ರಮಿತ ನಾನಯ್ಯ ॥೨॥

ಇಕ್ಕುಳವ ಕೈಯಲ್ಲಿ ಪಿಡಿದು ಕಾದ ಕಬ್ಬಿಣವನ್ನು ತೆಗಿಸಿ ।
ಹೊಕ್ಕು ಮುಂದಕೆ ಎಳಸಿ ಹೊಮ್ಮುವ ಗತಿ ಕಾಣೊ ॥
ಹೊಕ್ಕುಳ ಹೂವಿನ ಬಾಡದಾದಿ ಕೇಶವನ ಮೊರೆ
ಹೊಕ್ಕನಿಂದು ಕಾಯ್ದುಕೊಳ್ಳೊ ದೇವಾದಿ ದೇವೋತ್ತಮನೆ ॥೩॥

ಪ ॥

೧, ಪಪಪಪವಗರೀ ॥ ಸಾಸಸಾಗರಿ ॥ ಸನಿಸಾ.ರಿಗಾಮಾ ॥ ದಪಮಗಮಾಪದಪಮಪಾ
, ಎ ಳ್ಳು ಕಾ–ಳಿ ॥ ನ ಷ್ಟು ಭ ಕ್ತಿ ॥ ಎ– ನ್ನೊ ಳ ಗೆ ॥ ಇ ಲ್ಲ ವ ಯ್ಯ॥
೨ ,ದ ಪ ,, ॥ ಸಾರಿಸರಿಪಮಗರಿ ॥ ,, ॥ ,,
, ಎ ಳ್ಳು ,, ॥ ನ ಷ್ಟು ಭ – ಕ್ತಿ ॥ ,, ॥ ,,
, ಪ ದ ನಿ ಸೇ ॥ ರಿ ಸ ನಿ ದ ನೀ ಸೇ ಸ ॥ ನಿಸರಿಸೇ , , ರಿಸನಿದಾಪ ॥
ಕ ಳ್ಳ ರಿ ಗೆ ॥ ಕ – – ಳ್ಳ ನಂ ತೆ ॥ ಬೆ – – ಳ್ಳ ಕ್ಕಿ ॥
ನಿಸನಿದಪಾ ಪಮಗರಿಸರಿ ॥ ಗಮ
ಯಂ ದದಿಡಂ – ಭ ॥ ಎಳ್ಳು

## ಚ ರ ಣ ಗ ಳು

, ಪ ಪಾ ಪ ಪಾ ದ ಪ ॥ ಮಾಪಗಾಮ ॥ ೯ ಪದನಿದಮ ॥ ಗಾ ಮ ಗರಿಸಾ ॥
, ಗಂಡುಮುಣುಗಿನ ॥ ಹ ಕ್ಕಿ ಯಂ ತೆ ॥ – ಕಂಡಕಂಡ ॥ ನೀರ ಮುಳುಗಿ ॥
, ಮಮಮಾಮ ॥ ಮಾಪಪಮಮಗಮಾ ॥ ,ಪಪಾದನೀದ ॥ ಪಾ , , , ॥
, ಮಂಡೆಪೂಲೆ ॥ ಬಾಹುದೈ – ಸೆ ॥ –ಗತಿಯುಕಾಣೆ ॥ ನೊ –
, ದಪದನೀ ॥ ರಿ ಸ ದ ನಿ ಸ ಸ ॥ ,ದನಿಸರಿಗೇರಿ ॥
, ಮಂಡುಕನಂ ॥ ದ – ದಿ – ಕೆರೆಯ ॥ ದಂಡೆಯ–ಲ್ಲಿ ॥
, ರಿ ಸ ರಿ ಗ ರಿ ॥ ರಿ ಸ ನಿ ದ ನೀ ಸೇ ಸ ॥
, ದಂಡೆಯ -ಲ್ಲಿ ॥ ಕು ಳಿ ತು ಕೊಂ ಡು ॥

೧ , ದದ ಗ ರಿ ಸ ॥ ರಿ ಸ ನಿ ದ ನೀ ಸೇ ಸ ॥ , ದನೀಸ ಸ ನಿ ದಾ ಪ ॥
ಮಂಡೆಮುಸುಕ ॥ ನಿ – – ಟ್ಟು ಮೂ ಗ ॥ ಹಿ ಡಿ ವ ಭ್ರ ಮಿ ತ ॥
ಮಗಪಮದಪಮಗರೀಸಾ ॥
ನಾ – – ನ – – ಯ್ಯ ॥

, ಗರಿ ಸರಿಗೇರಿಸ ॥ ರಿ ಸ ನಿ ದ ನೀ ಸ ರಿ ಗ ॥ ರಿ ಸ ನಿ ದ ಪ ದ ॥
ಮಂಡೆಮುಸುಕ ॥ ನಿ – ಟ್ಟು ಮೂ ಗ ॥ ಹಿ ಡಿ ವ ಭ್ರ ಮಿ ತ ॥
ನಿಸನಿದಪಮಗರಿಸನಿಸರಿ ॥ ಗಮ
ನಾ – ನ – ಯ್ಯ – ॥

೩ ;, ಪಾದಪಾಪ ॥ ಮಾ ಪ ಪ ಗ ಮ ॥ ;,ಪಾದನಿದಮ ॥ ಗಗಮಪ ಗ ರಿ ಸ ॥
ಗಾಣದೆತ್ತಿ ॥ ನಂ ತೆ ಕ ಣ್ಣ ॥ ಮುಚ್ಚಿಪ್ರದ ॥ ಕ್ಷಿಣೆಯ ಮಾಡಿ ॥
;, ಮಾಮಮಾ ಮಮಾ ॥ ಮಪ ಪಗಮಾ ॥ , ದ ಪಾ ॰ ದ ॥ ದನೀದ ದಪಾ॰ ॥
ಕಾ ಣ ದೇ ತಿ ರು ॥ ಗುಪೆನು ಎರಡು ॥ ಕ ಣ್ಣಿ ದ್ದು ॥ ನಾ——ನು
;,ದಪಾನಿದಾ ಪದಪಾ ॥ ಪದ ನಿಸ಼ೀ ಸ಼ ॥ ;,ನೀದನೀಸ಼ೀರಿ಼ಸ಼ ॥ ನಿ ದ ನಿ ಸ಼ೀ ಸ಼ೀ ॥
;ಮಾ ಣಿ ಕ್ಯ ದ ॥ ರಾ ಶಿ ಯ ಲ್ಲಿ ॥ ಅಂ ಧ ಕ ರ್ದೈ ವ ॥ ರ ಕೂಡಿ ॥
; ದ ದ ಗ ರಿ಼ ಸ಼ ॥ ರಿ಼ ಸ಼ ನಿ ದ ನೀ ಸ಼ ಸ಼ ಸ಼ ॥ , ದ ನೀ ಸ಼ ನಿ ದ ಪ ॥
ಅಣಿಮು - ತ್ತ ॥ ಹಿ ಡಿ ದು ಹಿಡಿದು ॥ ಬಿ ಡು ವ ಭ್ರಮಿತ ॥
ಮಗಪಮದಪಮಗರೀಸಾ ॥
ನಾ – – – ನ – ಯ್ಯ ॥ಎ॥

೪ , ಪ ದಾ ನಿ ದಾ ಪಾ ॥ ಮಾ ಪ ಪ ಗ ಮಾ ॥ ;, ಪಾ ದ ನಿ ದ ಮ ॥
ಇ ಕ್ಕ ಳ ವ ಕೈ ॥ ಯ್ಯ ಲ್ಲಿ ಪಿ ಡಿ ದು ॥ – ಕಾ ದ ಕ ಬ್ಬಿ ಣ ॥
ಗಾ ಪ ಗ ರಿ ಸ ॥
ವ ನ್ನು ತೆ ಗಿ ಸಿ ॥
;, ಮಾಮಮಾ,ಮಮಾ ॥ ಮ ಪ ಮ ಪ ಗ ಮ ॥ ದ ಪ ದ ಪಾ ದ ನಿ ದ ॥
– ಹೊಕ್ಕು ಮುಂದಕೆ ॥ ಎಳಸಿ ಹೊಮ್ಮುವ ॥ ಗ ತಿ ಕಾ – – ॥
ಪಾ॰॰॰॰ ॥
ಣೊ – ॥
ದಾ॰ಪದಾ ನೀ॰ರಿ಼ಸ಼ೀ ॥ ರಿ಼ ಸ಼ ನಿ ದ ಸ಼ೀ ॰ ಸ಼ೀ ॰ ಸ಼ ॥ ಪ ದ ನಿ ಸ ರಿ಼ ಗೇ ರಿ಼ ೕ ರಿ಼ ಸ಼ ॥
ಹೊಕ್ಕುಳ ಹೂವಿನ ॥ ಬಾ – ಡ ದಾ ದಿ ॥ ಕೇ – – ಶ ವ ॥
ಸ಼ ನಿ ರಿ಼ ಸ಼ ನಿ ದ ನಿ ಸಾ ॥
ನ – – ಮೊ ರೆ ॥
, ದ ದ ಗ ರಿ಼ ಸ಼ ॥ ರಿ಼ ಸ಼ ನಿ ದ ನೀ ಸ಼ೀ ಸ಼ ॥ ದ ನಿ ಸ಼ೀ , ರಿ಼ ಸ ನಿ ದಾ ಪಾ ॥
. ಹೊ ಕ್ಕಿ ನಿ ಂ ದು ॥ ಕಾ – ಯ್ದು ಕೊಳ್ಳೊ ॥ ದೇ – – ವಾ – ದಿ ॥
ಮಗಪಮದಪಮಗರೀಸಾ ॥
ದೇ – ವೋ – ತ್ತ – ಮನೆ ॥
; ಗ ರಿ಼ ಸ಼ ರಿ಼ ಗ ॰ ರಿ಼ ॥ ರಿ಼ ಸ಼ ನಿ ದ ನೀ ಸ಼ ರಿ಼ ಗ ॥ ರಿ಼ ಸ಼ ನಿ ದ ಪ ದ ॥
; ಹೊಕ್ಕಿ ನಿಂ - ದು ॥ ಕಾ – ಯ್ದು ಕೊ ಳ್ಳೊ ॥ ದೇ – ವಾ – ದಿ ॥
ನಿಸನಿದಪಮಗರಿಸನ಼ಿಸರಿ ॥ ಗಮ
ದೇ – ವೋ ತ್ತ ಮ ನೆ ॥

## 6. ಹೇಗೆ ನೀ ದಾಸನಾದೆ

ರಾಗ : ಶಂಕರಾಭರಣ ತಾಳ : ಮಿಶ್ರಛಾಪು

ಪ ॥ ಹೇಗೆ ನೀ ದಾಸನಾದೆ ಪ್ರಾಣಿ

ಅ॥ ಪ ॥ ಹೇಗೆ ನೀ ದಾಸನಾದೆ ಹೀಗೆ ಸಂಸಾರದೊಳು
ಮಂಗನಂದದಿ ಭವಭಂಗವ ಪಡುವವ

ಆಸೆಯಬಿಡಲಿಲ್ಲ ಕಾಸು ಗಳಿಸುವೆಯಲ್ಲ
ದೋಷಕ್ಕೆ ಗುರಿಯಾಗಿ ಹೇಸಿಕೆಯೊಳು ಬಿದ್ದು ॥೧॥

ತನುವು ತನ್ನದು ಎಂದು ತನಯ ಮಾನಿನಿಯರೆ
ಇನಿತು ಎನಗೆ ಗತಿಯೆಂಬುವ ಮೂಢನೆ ॥೨॥

ತಲೆಹುಳಿತ ನಾಯಂತೆ ಹಲವು ಬೀದಿಯ ತಿರುಗಿ
ಗೆಲುವಿನಿಂದಲಿ ಮೂಲ ಮಲವನಳಿಯದೆ ॥೩॥

ಹಿರಿಯರ ನಿಂದಿಸಿ ಹರಿದಾಸನೆಂದೆನಿಸಿದೆ
ಹೊರೆಯೆ ಹೊಟ್ಟೆಗಾಗಿ ಕೇರಿಕೇರಿ ಚರಿಸಿದೆ ॥೪॥

ಸುತ್ತ ಕತ್ತಲೆ ಚಿಂತೆ ಮತ್ತೆ ಭಯದ ಭ್ರಾಂತಿ
ಚಿತ್ತಜನಯ್ಯ ದೊರಕುವ ಬಗೆಯೆಂತು ॥೫॥

ಭೋಗಿಶಯನನಪಾದ ರಾಗದಿಂ ಭಜಿಸದೆ
ಕಾಗಿನೆಲೆಯಾದಿ ಕೇಶವನ ಪಾದಗಳಲ್ಲಿ ॥೬॥

ಪ॥ ,ಗಮಪಾ ಗಾಮಪ ॥ ಗರಿಸ ಸದನ್ೀ ॥ ಸಾ,,,ಸಾ ॥ ಸರಿಗಮ ರಿಗಾ; ॥
-ಹೇ ಗೆ ನೀ - ॥ ದಾ-ಸನಾ- - ॥ ದೆ - - ಹೇ ॥ - ಪ್ರಾ - - ಣಿ - ॥
೨ -ಗಮ ಪಪಾಪ ,, ॥ ಮಗರಿಸಾ ,, ॥ ಸಾ,,,ಸೇ,ನಿ ॥ ದಪಾ,ಮಗಮಪಮ ॥
- ಹೇ - ಗೆ - ,, ॥ ,, ॥ ದೆ – - ಹೇ ॥ ಪ್ರಾ - - ಣಿ ॥
ಗ ರಿ ಗಾ
೩ -ಗಮ ಪರಿಸನಿದಪಾ, ॥ ರಿಗಮಾದಪಪಾ ಗರೀಸ ಸಧ಼ನ್ೀ ॥ ಸಾ
- ಹೇ - ಗೆ – - ನೀ ॥ ದಾ – – ಸ ನಾ – ॥ ದೆ
ಅ ॥ ಪ ॥ ; ಪದಪಪಮಗ ಮಾ ॥ ಪದನಿಸೇಸೇ ॥ , ಸನಿ ಸೇ ರಿ ಸ ಸೇ ॥
ಹೇ ಗೆ – - ನೀ ॥ ದಾ ಸನಾದೆ ॥ ಹೀ ಗೆ ಸಂ ॥
ಸರಿಸಸೇದ ನೀ ಸೇ ॥
ಸಾ ರ ದೊ ಳು ॥
; ಪ ದ ನಿ ಸೇ , ರಿ ॥ ಸ ನೀ ದಾ ಪಾ ಮಾ ॥
ಮಂ ಗ ನಂ ॥ ತೆ ಭ ವ ॥
ಪಾ , ಸ ನ್ೀ ದಾ ಪ ಮ ॥ ಗಮದ ಪಾ ಮ ಗಾ ಮ ಪ ಗಾ ಮ ರಿ ॥
ಭಂ ಗ ಪ ॥ ಡು ವ ವ ॥
ಗಮ ಪ ದಾ ಪ , ಪ ಮ ॥ ಗ ಮ ಪ ಮ ಗ ರಿ ಸಾ ಸ ಧ಼ ನ್ೀ ॥ ಸಾ
ಹೇ ಗೆ ನೀ ॥ ದಾ ಸಾ ನಾ ॥ ದೆ
ಚ ॥ ; ಪಾ ಪ ಪ ಮ ಗ ಮಾ ॥ , ಪ ದ ನೀ ಸೇ ಸೇ ॥
ಆ ಸೆ ಯ ॥ ಬಿ ಡ ಲಿ ಲ್ಲ ॥
, ಸ ನಿ ಸೇ ರಿ ಗ ಸ ಸ ॥ ಸ ರಿ ಸ ಸಾ ದ ನೀ ಸೇ ॥
ಕಾ ಸು ಗ ಳಿ ॥ ಸು ವೆ ಯ ಲ್ಲ ॥
ದೋ ಷ ಕೆ ॥ ಗು ರಿ ಯಾ ಗಿ ॥ , ಹೇ ಸಿ ಕೆ ಯೊ ಳು ॥
ಬಿ ದ್ದು ॥ (ಹೇಗೆ)

ತನುಪುತ ॥ ನ್ನದು ಎಂದು ॥ , ತನಯಮಾ ॥ ನಿನಿಯರೆ
ಇನಿತು ಎ ॥ ನಗೆ ಗತಿ ॥ ಯೆಂಬುವ ॥ ಮೂಢನೆ ॥ (ಹೇಗೆ)
ತಲೆಹುಳಿತ ॥ ನಾಯಂತೆ ॥ ಹಲವು ಬೀ ॥ ದಿಯ ತಿರುಗಿ ॥
ಗೆಲುವಿಸಿಂ ॥ ದಲಿ ಮೂಲ ॥ ಮಲವನ ॥ ಳಿಯದೆ ॥ (ಹೇಗೆ)
ಹಿರಿಯರ ॥ ನಿಂದಿಸಿ ॥ ಹರಿದಾಸ ॥ ನೆನಿಸಿದೆ ॥
ಹೊರೆಯ ಹೊ ॥ ಟ್ಟೆಗಾಗಿ ॥ ಕೇರಿ ಕೇರಿ ॥ ಚರಿಸಿದೆ ॥ (ಹೇಗೆ)
ಸುತ್ತಕ ॥ ತ್ತಲೆ ಚಿಂತೆ ॥ ಮತ್ತೆ ಭಯ ॥ ದ ಭ್ರಾಂತಿ ॥
ಚಿತ್ತಜ ॥ ನ್ನಯ್ಯ ॥ ದೊರಕುವ ॥ ಬಗೆಯೆಂತು ॥

# 7. ಹರಿಕೀರ್ತನೆಯ ಮಾಡಿ

ರಾಗ : ಹಿಂದೋಳ — ತಾಳ : ಖಂಡಛಾಪು

ಪ ॥ ಕೀರ್ತನೆಯಮಾಡಿ ಕೈವಲ್ಯಪಡೆದವರು ಜನರು,
ಮೂರ್ತಿ ಶ್ರೀ ಚೆನ್ನಕೇಶವನ ಮನವಿಟ್ಟು ॥

ಚ ॥ ಹಲವು ನಾಮಗಳಿಂದ ಹಂಬಲಿಸಿ ಕೆಡಬೇಡ
ಬಲವಂತರೊಡನೆ ಹಗೆಮಾಡಬೇಡ
ಕುಲದಲ್ಲಿ ಜನಿಸಿ ಕುಚೋದ್ಯಮಾಡಲು ಬೇಡ
ನಲಿದ್ದುರಿಯ, ಪೊಗಳದ ನಾಲಿಗೆಯುಬೇಡ ॥

ತೀರ್ಥಯಾತ್ರೆಗೆ ಪೋಗಿ ತಿರುತಿರುಗಿ ಬಳಲಿ ಕೃ
ತಾರ್ಥನಾದೆನು ಎಂಬ ಘನತೆ ಬೇಡ
ದೈತ್ಯಮರ್ದನಕಾಗಿ ನೆಲೆಯಾದಿ ಕೇಶವನ
ಮರೆತುಹೋಗದೆ ಭಜಿಸಿ ಸುಖಿಯಾಗು ಮನುಜ ॥

ಪ ॥ ಸೇನಿದಮ ॥ ಗಮಗಸಾ ॥ ಧೇ ನಿ ಸ ಸ ॥ ಮಗಮದನಿ ॥
ಕೀರ್ತನೆಯ ॥ ಮಾ ಡಿ ಕೈ ॥ ವ -ಲ್ಯಪಡೆ ॥ ವರುಜನರು ॥
,, ॥ ಗಮದನಿಸನಿದಮಗಸ ॥ ನಿಧನಿಸಮ ॥ ಗಮನಿದಮ ॥
,, ॥ ಮಾ - ಡಿ - ಕೈ - ॥ ವ -ಲ್ಯ ಪಡೆ ॥ ವರುಜನರು ॥
ಗಾ ಮ ದಾ ॥ ನಿದನಿಸೇ ॥ ನಿ ಸ ನಿ ದ ಮ ॥ ಗ ಸ ಗ ಮ ದ ನಿ ಸ ಗ ॥
ಮೂರ್ತಿಶ್ರೀ ॥ ಚೆ -ನ್ನಕೇ ॥ ಶ ವ ನ ಮ ನ ॥ ವಿ - ಟು - – ॥

ಚ ॥ ಮ ಮ ಮ ಮಾ ॥ ಗ ಮ ಗ ಸ ಸ ॥ ನಿ ಸ ನಿ ಧ ನಿ ॥ ಸ ಸ ಗ ಮ ಮ ॥
ಹ ಲ ವು ನಾ ॥ ಮ ಗ ಳಿಂ ದ ॥ ಹಂ ಬ ಲಿ ಸಿ ॥ ಕೆ ಡ ಬೇ -ಡ ॥
ಗ ಮ ದಾ ನಿ ॥ ದ ಮ ದ ನಿ ಸ ॥ ನಿ ದ ಮ ಗ ಮ ದ ಮ ॥ ಗ ಸಾ ,, ॥
ಬ ಲ ವಂ ತ ॥ ರೊಡ ನೆ ಹ ಗೆ ॥ ಮಾ - ಡ ಬೇ – – ॥ ಡ – ॥
ನಿ ದ ಮ ದ ನಿ ॥ ಸ ಸ ನೀ ಸ ॥ ನಿ ಸ ಮ ಗೇ ॥ ಗ ಮ ಗ ಸ ಸ ॥
ಕು ಲ ದ - ಲ್ಲಿ ॥ ಜ ನಿ ಸಿ ಕು ॥ ಚೋ - ದ್ಯ ಮಾ ॥ ಡ ಲು ಬೇ - ಡ ॥
ನಿ ಸ ಗ ನಿ ಸ ॥ ಸನಿಗಸನಿದನೀ ॥ ಸೇ ನಿ ದ ಮ ॥ ಗಸಗಮದನಿಸಗ ॥
ನಲಿದ್ದುರಿಯ ॥ ಪೊ -ಗ -ಳ -ದ ॥ ನಾ ಲಿ ಗೆಯು ॥ ಬೇ -ಡ – - ॥

ಇದರಂತೆ 2ನೇ ಚರಣ

# 8. ನಾರಾಯಣ ನಮೋ ನಾರಾಯಣ

ರಾಗ : ಮಧ್ಯಮಾವತಿ                    ತಾಳ : ಮಿಶ್ರ (ಮಧ್ಯಮ ಕಾಲ)

ಪ ॥ ನಾರಾಯಣ ನಮೋ ನಾರಾಯಣ ॥

ಅ॥ ಪ ॥ ಘೋರ ಸಂಸಾರ ಭವದೂರ ಋಷಿಜನಮನೋ
ಹಾರ ಸಾಕಾರ ಸಿರಿಧರರೂಪನೆ ನಮೋ ॥

ಚ ॥ ಉತ್ತಾನಪಾದನ ಅಣುಗಗೆ ಧ್ರುವಪದವಿ ।
ಚಿತ್ತಯಿಸಿ ಕೊಟ್ಟೆ ಶ್ರೀ ನಾರಾಯಣಾ ॥
ಉತ್ಕಚದ ಬಾಲೆಯ ಕಡು ಲಜ್ಜೆ ಸಭೆಯೊಳಗೆ ।
ವಿಸ್ತರಿಸಿ ಕಾಯ್ದೆ ಶ್ರೀನಾರಾಯಣಾ ॥
ಕತ್ತರಿಸಿನೆಗಳು ನುಂಗಿದ ಕುಮಾರಕನ ತಂ ।
ದಿತ್ತೆ ಮುನಿವರನಿಗೆ ನಾರಾಯಣಾ ॥
ಚಿತ್ತಜಾರಿ ಕೊಲ್ಲಲಂಬರೀಷ ಭೂ ।
ಪೋತ್ತಮನ ಕಾಯ್ದೆ ಶ್ರೀನಾರಾಯಣಾ ॥೧
ದುರಿತಾಬ್ಧಿಕುಂಭ ಸಂಭವ ದುರಿತಗಿರಿವಜ್ರ ।
ದುರಿತಮದಗಜಸಿಂಹ ನಾರಾಯಣಾ ॥
ದುರಿತಾಹಿವೈನತೇಯ ದುರಿತಮೃಗವ್ಯಾಘ್ರನೆ ।
ದುರಿತವನದಾವಶಿಖಿ ನಾರಾಯಣಾ ॥
ದುರಿತಜೀಮೂತ ಪವನ ದುರಿತಾಂಧಕಾರದವಿ ।
ದುರಿತಲ ತಾಲವಿತ್ರ ನಾರಾಯಣಾ ॥
ದುರಿತಮರ್ದನಕಾಗಿ ನೆಲೆಯಾದಿಕೇಶವನೆ ।
ದುರಿತ ಬಂಧವಪರಿದೆ ನಾರಾಯಣಾ ॥೨

| | | | | |
|---|---|---|---|---|
| ಪ ॥ ರಿಮರಿಮಾಪಮ | ॥ ರೀಮರೀಸಾ | ॥ ನ್ರಿಪ಼ೇಪ಼ೇರಿಸ | ॥ ರೀೀರಿಸನ್ರಿಸ | ॥ |
| ನಾ ರಾ ಯ | ॥ ಣ – ನ ಮೋ | ॥ ನಾ ರಾ ಯ | ॥ ಣ – – | ॥ |
| ರೀ ಮ ಪ ನಿ ಸ ನಿ | ॥ ಪ ಮ಼ಾ ರೀ ಸಾ | ॥ | ,, | |
| ನಾ ರಾ ಯ | ॥ ಣ ನಮೋ | ॥ | ,, | |
| ಅ ॥ ಮಾ,ಮಾಮಾ | ॥ ರೀ ಸಾ ರಿ ಮ | ॥ ರೀಮಾಪಪ | ॥ ಪಮಾಪಾನೀ | ॥ |
| ಘೋ ೯ ರ ಸಂ | ॥ ಸಾ ರ ಭ ವ | ॥ ದೂರ ಋಷಿ | ॥ ಜನ ಮನೋ | ॥ |
| ಸೇ ೯ ಸೇ ಸೇ | ॥ ನಿಸನಿಪಾಪಮ | ॥ ಪನೀಪನಿಸನಿ | ॥ ಪಮಾರಿಮರಿಸ | ॥ |
| ಹಾ ರ ಸಾ | ॥ ಕಾ—ರ ಸಿ ರಿ | ॥ ಧರ ರೂ – | ॥ ಪನೆ ನ—ಮೋ | ॥ |

ಚ ॥ ಪಾ ೕ ಪಾ ಪಾ ॥ ಪಾ ೕ ಪಾ ಮಾ ॥ ರಿ ಮಾ ಪಾ ಮಾ ॥
ಉ – ತ್ತಾ ನ ॥ ಪಾ ದ ನ ॥ ಅ ಣು ಗ ಗೆ ॥
ರಿ ರೀ ಮ ರಿ ಸಾ ॥
ಧ್ರು ವ ಪ ದ ವಿ ॥

ರೀ ಮ ರಿ ಸಾ ॥ ನಿ ಧ ೕ ನಿ ೕ ಸಾ ॥ ರೀ ಮಾ ರೀ ಮ ॥
ಚಿ ತ್ತ ಯಿ ಸಿ ॥ ಕೊ ಟ್ಟೆ ಶ್ರೀ ॥ ನಾ – ರಾ – ಯ ॥
ಪಾ ೕ ೕ ೕ ೕ ೕ ॥
ಣ – – – ॥

ಮಾೕ ಮಾ ಮಾ ॥ ರಿ ಸ ರಿ ಮಾ ಮಾ ॥ ರಿ ಮಾ ಪಾ ನೀ ॥
ಉ – ತ್ಕ ಚ ॥ ಬಾ ಲೆ ಯ ॥ ಕ ಡು ಲ ಜ್ಜೆ ॥
ಪ ಮಾ ಪ ಪ ನೀ ॥
ಸ ಭೆ ಯೊ ಳ ಗೆ ॥

ಸೇ ಸ ನಿ ಪಾ ॥ ಮಪಮರೀಸಾ ॥ ರಿ ಸಾ ರೀ ಪ ಮ ॥
ವಿ ಸ್ತ ರಿ ಸಿ ॥ ಕಾ ಯ್ದೆ ಶ್ರೀ ॥ ನಾ – ರಾ – ಯ ॥
ರೀ ೕ ಸಾ ಸಾ ॥
ಣ - - - ॥

ಪಾ ೕ ಪ ಪ ನೀ ॥ ಪ ಪಾ ಮಾ ಪಾ ॥ ಪ ನೀ ಪಾ ನೀ ॥
ಕ ತ್ತ ರಿ ಸಿ ॥ ನೆ ಗ ಳು ನು ಂ ॥ ಗಿ ದ ಕು ಮಾ ॥
ಸ ಸೇ ಸೇ ರೀ ॥
ರ ಕ ನ ತಂ ॥

ಸೇ ರೀ ಸ ರೀ ॥ ಸನೀಪಾಮಾ ॥ ಪನೀಸೇನೀ ॥ ಸೇ ೕ ೕ ೕ ೕ ೕ ॥
ದಿ ತ್ತೆ ಮು ನಿ ॥ ವ ರ ನಿ ಗೆ ॥ ನಾ-ರಾ-ಯ ॥ ಣ - - ॥
ರೀ ರೀ ರೀ ॥ ರಿಮಾರೀಸೇ ॥ ಸೇ ರೀ ಸೇ ॥ ಸ ನಿ ಪ ನಿ ಸ ರೀ ॥
ಚಿ ತ್ತ ಚಾ ॥ ರಿ - ಕೊ ಲ್ಲ ॥ ಲಂ ಬ ರಿ ೕ ॥ ಷ - ಭೂ - ॥
ಸೇ ಸ ಸ ಸೇ ॥ ನಿಸನಿಪಾಮಾ ॥ ಪಾನಿಸನಿಪಮ ॥ ರಿ ಸಾ ರಿ ಮ ಪ ನಿ ॥
ಪೋತ್ತಮನ ॥ ಕಾ-ಯ್ದೆ ಶ್ರೀ ॥ ನಾ ರಾ-ಯ ॥ ಣ - - - ॥
ಸೇ ನಿ ಸ ನಿ ೕ ॥ ಪಮಾರೀಸಾ ॥ ರಿಸಾರಿಮಪಮ ॥ ರಿ ೕ ೕ ಸಾ ಸಾ ॥
ನಾ ರಾ ಯ ॥ ಣ-ನಮೋ ॥ ನಾ -ರಾ -ಯ ॥ ಣ - -

-- ಇದರಂತೆ ಮಿಕ್ಕ ಚರಣಗಳು --

# *PUBLICATIONS OF THE PERCUSSIVE ARTS CENTRE*

Monograph : "Great Layavadyakaras of Karnatak Music"
— B.M. Sundaram

Monograph : "Art and Science of Traditional Tabla Play"
— Nikhil Ghosh

Monograph : "ಕನ್ನಡ ಸಾಹಿತ್ಯದಲ್ಲಿ ತಾಳವಾದ್ಯಗಳ ಉಲೇಖ"
— ಬಿ.ವಿ.ಕೆ. ಶಾಸ್ತ್ರಿ

Tala Sangraha : "Compendium of data on Talas"
— B.M. Sundaram

Lecture Jewels' Casket : — Collection of lectures delivered under Percussive Arts Centre.

Monograph : "Psychology of Laya"
— S.K. Ramachandra Rao

Monograph : "The Correct Understanding of Some of the Taala Dasa Praanas
S.R. Janakiraman



## ಸಂಗೀತ ಕಲಾರತ್ನ
## ಆರ್. ಕೆ. ಶ್ರೀಕಂಠನ್

68 ವರ್ಷಗಳ ಆರ್. ಕೆ. ಶ್ರೀಕಂಠನ್ ಅವರು ಕರ್ನಾಟಕ ಸಂಗೀತ ಸಂಪ್ರದಾಯದ ಇಂದಿನ ವಿದ್ವನ್ಮಣಿಗಳಲ್ಲಿ ಒಬ್ಬರಾಗಿದ್ದಾರೆ, ಕರ್ನಾಟಕ ಸಂಗೀತದ ಗಾಯಕರಲ್ಲಿ ಶ್ರೀಯುತರು ವರಕಲಾವಿದರಾಗಿ ಶ್ರೇಷ್ಠ ಗಾಯಕರಲ್ಲಿ ಒಬ್ಬರಾಗಿ ಕಳೆದ ಐವತ್ತು ವರ್ಷಗಳಿಂದ ನಿರಂತರವಾಗಿ ಹಾಡುತ್ತ ಬಂದಿದ್ದಾರೆ. ಇಂದಿನ ವಿದ್ವಾಂಸರಲ್ಲಿ ಉತ್ತಮ, ಶಾಸ್ತ್ರೀಯ, ಧೀರ, ಗಂಭೀರ ಶೈಲಿಯ, ಸ್ಪಷ್ಟ ಸಾಹಿತ್ಯೋಚ್ಚಾರಣೆಯ ತಮ್ಮದೇ ಅಚ್ಚಿನ, ಆಕರ್ಷಕ, ಕಲಾತ್ಮಕ. ನೆಮ್ಮದಿಯ ಗಾಯನಕ್ಕೆ ಶ್ರೀಯುತರು ಹೆಸರಾಗಿದ್ದಾರೆ. ಕರ್ನಾಟಕ ಸಂಗೀತ ತ್ರಿಮೂರ್ತಿಗಳ ಕೃತಿಗಳ, ಇಂದಿನ ವಾಗ್ಗೇಯಕಾರರ ಕೃತಿಗಳ ಹಾಗೂ ಹರಿದಾಸ ಕೃತಿಗಳ ಶ್ರೀಕಂಠನ್ ಅವರ ಗಾಯನ ತೂಕದ ನಿರೂಪಣೆಯಾಗಿರುವುದೆಂದು ಅನೇಕರ ಅಭಿಪ್ರಾಯ. ಸರಳ, ಸಂಪನ್ನ, ಸಹೃದಯ ವ್ಯಕ್ತಿತ್ವದ ಶ್ರೀಕಂಠನ್ ಅವರು ಉತ್ತಮ ಗಾಯಕರಷ್ಟೇ ಅಲ್ಲ, ಉತ್ತಮ ಸಂಗೀತ ಶಿಕ್ಷಕರೂ ಆಗಿದ್ದಾರೆ.

ಆಕಾಶವಾಣಿಯ ಕಲಾವಿದರಾಗಿ 32 ವರ್ಷ ಸೇವೆ ಸಲ್ಲಿಸಿ ನಿವೃತ್ತರಾಗಿ, ಸಂಗೀತ ಕಲಾಭಿವೃದ್ಧಿಗಾಗಿ ನಿರಂತರ ಶ್ರಮಿಸುತ್ತಿದ್ದಾರೆ. ಸಂಗೀತ ಪರಂಪರೆಯ ಮನೆತನದಲ್ಲಿ ಹುಟ್ಟಿದ ಇವರಿಗೆ ತಂದೆ ರುದ್ರಪಟ್ಟಣ ಕೃಷ್ಣಶಾಸ್ತ್ರಿಗಳೇ ಪ್ರಥಮ ಗುರುಗಳು, ಅನಂತರ ಪ್ರಖ್ಯಾತ ಪಿಟೀಲು ವಿದ್ವಾಂಸರಾದ ಆರ್.ಕೆ. ವೆಂಕಟ ರಾಮಾಶಾಸ್ತ್ರಿಗಳಲ್ಲಿ ಅಧ್ಯಯನ. ಶ್ರೀಯುತರ ಮನೆತನ ಶ್ರೀ ತ್ಯಾಗರಾಜರ ಶಿಷ್ಯ ಪರಂಪರೆಗೆ ಸೇರಿದ್ದು. ಸಂಗೀತ ಕಲಾನಿಪುಣರು ಮಾತ್ರವೇ ಅಲ್ಲ, ಶ್ರೀಯುತರು ಮೈಸೂರು ವಿಶ್ವವಿದ್ಯಾನಿಲಯದ ಪದವೀಧರರೂ ಆಗಿದ್ದಾರೆ.

ಆಕಾಶವಾಣಿಯ ರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ, ಸಂಗೀತ ಸಮ್ಮೇಳನಗಳಲ್ಲಿ ಶ್ರೀಯುತರು ಹಲವಾರು ಬಾರಿ ಹಾಡಿದ್ದಾರೆ, 1979ರಲ್ಲಿ ಕೇಂದ್ರ ಸಂಗೀತ ನಾಟಕ ಅಕಾಡಮಿಯ ಸನ್ಮಾನ. 1980ರಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡಮಿಯ ಸನ್ಮಾನ, 1986ರಲ್ಲಿ ರಾಜ್ಯೋತ್ಸವ ಸನ್ಮಾನ, 1981ರಲ್ಲಿ ಮದರಾಸು ಸಂಗೀತ ಅಕಾಡಮಿಯ ರಾಜಾ ಅಣ್ಣಾಮಲೆ ಸನ್ಮಾನ, 1982ರಲ್ಲಿ ಟಿ. ಟಿ. ಕೆ. ಸ್ಮಾರಕ, ಮದರಾಸು ಸಂಗೀತ ಅಕಾಡಮಿಯ ಸನ್ಮಾನ — ಇವೆಲ್ಲ ಶ್ರೀಯುತರ ಗಾಯನಕ್ಕೆ ಸಂದ ಗೌರವಗಳು. ಬೆಂಗಳೂರು ಗಾಯನ ಸಮಾಜದ ಸಮ್ಮೇಳನದ ಅಧ್ಯಕ್ಷರಾಗಿ "ಸಂಗೀತ ಕಲಾರತ್ನ" ಬಿರುದಾಂಕಿತರಾಗಿದ್ದಾರೆ. ಕರ್ನಾಟಕ ಸಂಗೀತ ನೃತ್ಯ ಅಕಾಡಮಿಯ ಸದಸ್ಯರಾಗಿ, ಕರ್ನಾಟಕ ಗಾನಕಲಾ ಪರಿಷತ್ತಿನ ತಜ್ಞರ ಸಮಿತಿ ಅಧ್ಯಕ್ಷರಾಗಿ ಸಂಗೀತ ಕ್ಷೇತ್ರದಲ್ಲಿ ಎಲ್ಲರಿಂದಲೂ ಮಾರ್ಗದರ್ಶನಕ್ಕಾಗಿ ಅಪೇಕ್ಷಿತರಾದ ವಿದ್ವನ್ಮಣಿ ಆರ್.ಕೆ. ಶ್ರೀಕಂಠನ್.